ವರದರಾಜ ಪ್ರಕಾಶನ 58

# ಮಂಥನ

( ಸಂಸ್ಕೃತಿ ಸಾಹಿತ್ಯ ಸಂಭ್ರಮ )

ಲೇಖಕರು
ವಿದ್ಯಾಭೂಷಣ, ಸಾಹಿತ್ಯ ಪ್ರದೀಪ, ಕನ್ನಡ ಕುಲಭೂಷಣ ವಾಸವಾಙ್ಮಯ ಭೂಷಣ
**ಆದ್ಯರಾಮಾಚಾರ್ಯ**

**ವರದರಾಜ ಪ್ರಕಾಶನ**
114, ಮೈ. 4ನೇ ಮೈನ್, 4ನೇ ಫೇಸ್, 7ನೇ ಬ್ಲಾಕ್
ಬನಶಂಕರಿ 3ನೇ ಹಂತ, ಬೆಂಗಳೂರು - 560085
**ದೂರವಾಣಿ - 6692139**

ಮಂಥನ ಸಂಸ್ಕೃತಿ ಸಾಹಿತ್ಯ ಸಂಭ್ರಮ
**Manthana Samkruti Sahitya Sambram**
ಲೇಖಕರು : ಆದ್ಯರಾಮಾಚಾರ್ಯ
Writer : **Adya Ramachar**

ಪುಟಗಳು : viii + 160
Pages : viii + 160

ಮೊದಲನೆ ಮುದ್ರಣ : ೧೯೯೯
First Edition : 1999



ಪ್ರಕಾಶಕರು :
ವರದರಾಜ ಪ್ರಕಾಶನ 114, ವೈ, ಭೀಮರಥಿ, 4ನೇ ಮೇನ್
4ನೇ ಫೇಸ್, 7ನೇ ಬ್ಲಾಕ್ ಬನಶಂಕರಿ ಮೂರನೇ ಹಂತ
ಬೆಂಗಳೂರು - 560 085, ದೂರವಾಣಿ : 6692139

This Book is printed and published with kind financial help of the Executive officer T.T. Shree Venkateshwaraswamy Devasthanam, Tirupathi under their Scheme "Aid to Publish Religious Books."

Price : **Rs. 60-00** ಬೆಲೆ : ಅರವತ್ತು ರೂಪಾಯಿಗಳು

Printed at
**Sathyasri Printers Pvt Ltd.,**
164, 5th Main, Chamarajpet
Bangalore - 560 018
**Phone : 625736**

# ಅರ್ಪಣೆ



ನನ್ನ ಪರಮ ಪೂಜ್ಯ ಗುರುಗಳಾದ ಪದ್ಮಶ್ರೀ, ಡಾ. ಸೇತು ಮಾಧವರಾವ್ ಪಗಡಿ ಐ.ಎ.ಎಸ್. ಹಾಗೂ ಗುರುಪತ್ನಿ ಉಷಾ ತಾಯಿ ಇವರಿಬ್ಬರೂ ಒಂದೇ ಕಾಲದಲ್ಲಿ ಇಹಲೋಕದಿಂದ ಕಣ್ಮರೆಯಾದರು. ಇಂದಿಗೂ ಆ ದಂಪತಿಗಳು ನನ್ನ ಸಾಹಿತ್ಯ ಜೀವನಕ್ಕೆ ರಕ್ಷಾಕವಚರಾಗಿ ಆಶೀರ್ವದಿಸುತ್ತ ಕೃತಿ ರಚನೆಗಳಿಗೆ ಪ್ರೇರಣೆಯನ್ನೀಯುತ್ತಿರುವರು. ಆ ದಿವ್ಯ ಚೇತನರನ್ನು ಸ್ಮರಿಸಿ ಪ್ರಾಂಜಲಭಾವದಿಂದ ಈ ಕೃತಿಯನ್ನು ಹಿರಿಯ ದಂಪತಿಗಳಿಗೆ ಸಮರ್ಪಿಸುತ್ತೇನೆ.

18-3-199 ಲೇಖಕ

ಆದ. ರಾಮಾಚಾರ್ಯ

**ಕರ್ನಾಟಕ ರಾಜ್ಯ ಅರ್ಚಕರ ಮತ್ತು ಆಗಮಿಕರ ಕ್ಷೇಮಾಭಿವೃದ್ಧಿ ಸಂಘ ( ರಿ. )**

ನಂ. 29, 5ನೇ ಮುಖ್ಯ ರಸ್ತೆ, 5ನೇ ಅಡ್ಡ ರಸ್ತೆ, ಗಂಗಾನಗರ ಬಡಾವಣೆ, ಗಂಗಾನಗರ, ಬೆಂಗಳೂರು - 560 032

ರಿ.ನಂ. 219 ಯ 97-98 ತಾ॥ 31-7-97 (ಕ.ಸೊ.ರಿ. ಕಾಯಿದೆ 1960)

# ಪ್ರಶಸ್ತಿ ಪತ್ರ

**ಬುಧವಾರ 11-11-1998** ರಂದು ಬೆಂಗಳೂರಿನಲ್ಲಿ ನಡೆದ ಪ್ರತಿಭಾವಂತ ಆಗಮಿಕರ ಸನ್ಮಾನ ಸಮಾರಂಭದಲ್ಲಿ ಮಾನ್ಯ **ಶ್ರೀ ಅಧ್ಯರಾಮಾಚಾರ್ಯರು** ಅವರನ್ನು **ತಂತ್ರಸಾರ** ಶಾಸ್ತ್ರ ಪ್ರೌಢಿಮೆಗಾಗಿ ಕರ್ನಾಟಕ ರಾಜ್ಯ ಅರ್ಚಕರ ಮತ್ತು ಆಗಮಿಕರ ಕ್ಷೇಮಾಭಿವೃದ್ಧಿ ಸಂಘದ ವತಿಯಿಂದ ಸನ್ಮಾನಿಸಿ ಈ ಪ್ರಶಸ್ತಿ ಪತ್ರವನ್ನು ನೀಡಲಾಯಿತು.

ಕಾರ್ಯದರ್ಶಿಗಳು — ಅಧ್ಯಕ್ಷರು

ದಿನಾಂಕ : 11-11-98 — ಕರ್ನಾಟಕ ರಾಜ್ಯ ಅರ್ಚಕರ ಮತ್ತು ಆಗಮಿಕರ ಕ್ಷೇಮಾಭಿವೃದ್ಧಿ ಸಂಘ (ರಿ).

# ಪ್ರಕಾಶಕರ ಮಾತು

ವರದರಾಜ ಪ್ರಕಾಶನ ಸಂಸ್ಥೆಯು ಕೇವಲ ಐತಿಹಾಸಿಕ ಕಾದಂಬರಿ ಹಾಗೂ ಸಣ್ಣ ಕಥೆಗಳನ್ನು ವಾಚಕರಿಗೆ ಒಪ್ಪಿಸುತ್ತ ಬಂದಿದೆ. ಪಂಡಿತ ಆದ್ಯರಾಮಾಚಾರ್ಯರು ನಮ್ಮ ನಾಡಿನ ಖ್ಯಾತ ಐತಿಹಾಸಿಕ ಲೇಖಕರೆನಿಸಿಕೊಂಡಿದ್ದಾರೆ. ಅವರು ನಮ್ಮ ಪ್ರಕಾಶನವನ್ನು ಬೆಳೆಸಲು ಕಾರಣರಾಗಿದ್ದಾರೆ. ಹಿರಿಯರಾದ ಅವರ ಈ ಸಹಕಾರವನ್ನು ತುಂಬು ಹೃದಯದಿಂದ ಸ್ಮರಿಸುತ್ತೇವೆ.

25.2.99

ವರದರಾಜ ಪ್ರಕಾಶನ
ಬೆಂಗಳೂರು

# ಲೇಖಕನ ಮಾತು

ಭಾರತೀಯ ಸನಾತನ ಧರ್ಮವು ಅನ್ಯ ರಾಷ್ಟ್ರಗಳ ಸಂಸ್ಕೃತಿಯ ಮೇಲೆ ಎಂದೂ ದಾಳಿ ಮಾಡಿದುದಿಲ್ಲ. ಅದು ತನ್ನ ಮೇಲಾದ ಪ್ರತಿಕ್ರಿಯೆಗಳೆನ್ನೆಲ್ಲ ಉದಾತ್ತ ಭಾವನೆಗಳಿಂದ ಸ್ವೀಕರಿಸುತ್ತ ಬಂದಿದೆ.

ಭಾರತೀಯರಾದ ನಾವು ಸಂಗೀತ ಸಾಹಿತ್ಯ ಶಿಲ್ಪಕಲೆಗಳ ಮುಖಾಂತರ ವಿಶ್ವಕ್ಕೆ ಶಾಂತಿಸಂದೇಶವನ್ನು ಸಾರುತ್ತ ಬಂದಿದ್ದೇವೆ. ನಮ್ಮ ಪೂರ್ವಜರು ತಂತ್ರಜ್ಞಾನ, ಅಣು ವಿಜ್ಞಾನ, ಅಂತರಿಕ್ಷ ತತ್ವಜ್ಞಾನ, ಮೊದಲಾದ ವಿಷಯಗಳನ್ನು ಕುರಿತು ಅಮೋಘವಾದ ಸಾಹಿತ್ಯವನ್ನು ಒದಗಿಸಿ ಕೊಟ್ಟಿದ್ದಾರೆ, ಇಂದು ಯಾಂತ್ರೀಕರಣ, ಉದಾರೀಕರಣ, ಜಾಗತೀಕರಣ ಎಂಬ ಮಾತುಗಳು, ಕೇಳಿ ಬರತೊಡಗಿವೆ. ಆದರೆ ಈ ವಿಚಾರದಲ್ಲಿಯೂ ನಮ್ಮ ಪ್ರಾಚೀನರು ಹಿಂದೆ ಬಿದ್ದವರಲ್ಲ ಇಂಥ ವಿಷಯಗಳನ್ನು ಕುರಿತು ಬಹುಕಾಲದಿಂದ ಅವರು ಚಿಂತನ ಮಂಥನಗಳನ್ನು ನಡೆಸುತ್ತ ಬಂದಿದ್ದಾರೆ.

ಕಲೆ ಸಂಸ್ಕೃತಿ ಇತಿಹಾಸಗಳ ಮಹೌಲ್ಯವನ್ನು ಕುರಿತು ಅಭ್ಯಾಸಮಾಡಿದಾಗಲೇ ನಮ್ಮ ತನದ ಅರಿವು ಮೂಡಲು ಸಾಧ್ಯ. ಆದುದರಿಂದ ಈ ಗ್ರಂಥದಲ್ಲಿ ಸಂಯುಕ್ತ ಕರ್ನಾಟಕ, ಕಸ್ತೂರಿ, ಕರ್ಮವೀರ, ಸಪ್ತಗಿರಿ, ಶ್ರೀ ಸುಧಾ, ಶುಭೋದಯ ಮೊದಲಾದ ಪತ್ರಿಕೆಗಳಲ್ಲಿ ಆಗಾಗ ಪ್ರಕಟವಾದ ಲೇಖನಗಳನ್ನೆಲ್ಲ ಒಂದು ಗೂಡಿಸಿ ಗ್ರಂಥರೂಪದಲ್ಲಿ ಹೊರ ತರಲಾಗಿದೆ. ಸಾಹಿತ್ಯ ಸಂಜೀವನಿ ಎಂಬ ಗ್ರಂಥದ ನಂತರ ಹೊರಬಂದ ಈ ಕೃತಿಗೆ ''ಮಂಥನ'' ಎಂಬ ಹೆಸರಿನಿಂದ ವಾಚಕರ ಕೈಲಿಡುತ್ತಿದ್ದೇನೆ. ಇದು ನನ್ನ ಐವತ್ತೇಳನೇ ಕೃತಿಯಾಗಿದೆ ಸಹೃದಯ ವಾಚಕರು ಇದನ್ನು ಉದಾರಮನದಿಂದ ಸ್ವೀಕರಿಸಿ ಅನುಗ್ರಹಿಸಬೇಕೆಂದು ಕೇಳಿಕೊಳ್ಳುತ್ತೇನೆ.

25.2.99 ಆದ್ಯರಾಮಾಚಾರ್ಯ

# ಅನುಕ್ರಮಣಿಕೆ


| | | ಪುಟ ಸಂಖ್ಯೆ |
|---|---|---|
| 1. | ಕಾಳಿದಾಸ | 1 |
| 2. | ಉಜ್ಜಯಿನ | 19 |
| 3. | ಕಪಿಸ್ಥಲ | 23 |
| 4. | ಪ್ರಥೂದಕ ಪರಮ ಪುಣ್ಯಕ್ಷೇತ್ರ | 25 |
| 5. | ಪವಿತ್ರ ಕ್ಷೇತ್ರ ನೈಮಿಷಾರಣ್ಯ | 27 |
| 6. | ಬ್ರಹ್ಮಾವರ್ತ | 31 |
| 7. | ಗರಳಪುರಿ (ನಂಜನಗೂಡು) | 39 |
| 8. | ವಿದ್ಯಾಧೀಶರು | 53 |
| 9. | ಬಾವಿಯಲ್ಲಿ ಅಪರಿಮಿತ ಸಂಪತ್ತು | 59 |
| 10. | ಕೊನೆಯ ಪೇಶ್ವೆ ಬಾಜೀರಾಯನ ಕಾಣಿಕೆ | 63 |
| 11. | ಸರ್ವಸ್ವವನ್ನು ಶ್ರೀಮಠಕ್ಕೊಪ್ಪಿಸಿದ ರಾಜಮನೆತನ | 67 |
| 12. | ಕೊಲ್ಲೂರಿನ ಮೂಕಾಂಬಿಕಾ | 70 |
| 13. | ಇತಿಹಾಸದ ಹಿರಣ್ಯಗರ್ಭ | 76 |
| 14. | ಜ್ಞಾನೋದಯ | 81 |
| 15. | ರಘುನಾಥ ಹನುಮಂತೆ | 84 |
| 16. | ತಿರುಮಲದಲ್ಲಿ ಮಹಂತರ ಆಡಳಿತ | 87 |
| 17. | ಮಹೇಶ್ವರಭಟ್ಟ : ಗೋಮಾಂತಕದ ಪಂಡಿತ ಶ್ರೇಷ್ಠ | 90 |
| 18. | ಸತ್ಯಸಂಧ ವಿಜಯ ಹಾಗೂ ಕೋನೇರಿ ಮನೆತನ | 92 |
| 19. | ಜಯತೀರ್ಥರ ಮೂಲ ವೃಂದಾವನ ಮಳಖೇಡದಲ್ಲಿ | 96 |

20. ಶ್ರೀನಾಥದ್ವಾರ 100

21. ಶ್ರೀಮದುತ್ತರಾದಿಮಠದ ಸಂಪತ್ತಿನ ವೈಭವ 111

22. ವೆಂಕಟಾದ್ರಿ ಸಮಂಸ್ಥಾನ 115

23. ಸಪ್ತವ್ಯಾಧರು ಯಾರು? 120

24. ಗರ್ವಹರಣಮಾಡಲು ಭಗವಂತನ ಆಟ 123

25. ಕಲಾವಿದರ ಸ್ವರ್ಗ ಖಜುರಾಹೋ 129

26. ತ್ರಿಚ್ಚೂರ ವಡಕ್ಕುನಾಥ ದೇವಮಂದಿರ 136

27. ಕೇರಳದ ಪೂನಮ್ ಉತ್ಸವ 141

28. ವೀರ ಪ್ರತಾಪಿ ಸಂಕಣ್ಣ ನಾಯಕ (ಕೆಳದಿ) 146

29. ನಳದುರ್ಗ ಕೋಟೆಯ ಇತಿಹಾಸ 152

30. ಭಾವೈಕ್ಯಕ್ಷೇತ್ರ-ಕಾಶಿ 157

# ಯಕ್ಷ ಸೃಷ್ಟಿಯ ಮಹಾಕವಿ ಕಾಳಿದಾಸ

ಭಾರತದ ಮಹಾ ಕವಿ ಕಾಳಿದಾಸನು ತನ್ನ ಕೃತಿಗಳಿಂದಾಗಿ ವಿಶ್ವಮಾನ್ಯ ಕವಿ ಎಂದೆನಿಸಿಕೊಂಡಿದ್ದಾನೆ. ಈತನೇ ರಾಷ್ಟ್ರಭಾರತದ ಪ್ರಥಮ ಕವಿ ಎಂದೇನಲ್ಲ. ಈತನಿಗಿಂತ ಮೊದಲು ದೇದೀಪ್ಯಮಾನವಾದ ಅನೇಕ ನಾಟಕಗಳನ್ನು ನಮ್ಮ ಕವಿಗಳು ರಚಿಸಿದ್ದಾರೆ. ಸ್ವಲ್ಪ ನಿಧಾನವಾಗಿ ಯೋಚಿಸಿದಲ್ಲಿ ಋಗ್ವೇದದಲ್ಲಿ ದೊರೆಯುವ ಪರ್ಜನ್ಯ ಸೂಕ್ತ, ಉಷಃಕಾಲ ಸೂಕ್ತ, ವರುಣಸೂಕ್ತಗಳನ್ನು ಉದಾಹರಣೆಯಾಗಿ ಕೊಡಬಹುದು. ಅನಂತರ ಅಶ್ವಘೋಷನ ಸುಂದರಾನಂದ ಹಾಗೂ ಬುದ್ಧಚರಿತದಂತಹ ಮಹಾಕಾವ್ಯಗಳನ್ನು ಉದಾಹರಿಸಬಹುದು. ಈ ವಿಚಾರದಲ್ಲಿ ರಾಮಾಯಣ ಹಾಗೂ ಮಹಾಭಾರತ ಗ್ರಂಥಗಳನ್ನೂ ಸಹ ದೂರಿಡುವಂತಿಲ್ಲ. ಅನೇಕರು ಈ ಗ್ರಂಥಗಳ ಭಾಗವನ್ನಾಯ್ದುಕೊಂಡು ಕೃತಿರಚನೆ ಮಾಡಿರುವದುಂಟು. ಕಾಳಿದಾಸನ ನಂತರ ಉದಗ್ರನ ಕಾಲದವರೆಗೆ ಬೇರೊಂದು ಕಾಲವು ಆರಂಭವಾಗುವುದು. ಕಾಳಿದಾಸನಿಗಿಂತ ಮೊದಲು ಅಂದರೆ ರಾಮಾಯಣ ಮಹಾಭಾರತದ ಕಾಲವನ್ನು ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ ಅವಲೋಕಿಸಬೇಕಾಗುವದು. ಏಕೆಂದರೆ ಆ ಕಾಲದಲ್ಲಿ ಕಾವ್ಯ ಅಥವಾ ನಾಟಕಗಳ ರಚನೆಯಾದುದು ಅಷ್ಟೊಂದು ಕಂಡುಬರುವುದಿಲ್ಲ. ಆದರೂ ಸಹ ರಾಮಾಯಣ, ಮಹಾಭಾರತದ ಕಾಲವನ್ನು ಶೂನ್ಯ ಕಾಲವೆಂದು ಭಾವಿಸಲು ಸಾಧ್ಯವಿಲ್ಲ.

ಕಾಳಿದಾಸನಿಗಿಂತಲೂ ಪೂರ್ವದಲ್ಲಿ ಮಾನವನ ಅಂತಃಸೌಂದರ್ಯ ಪ್ರದರ್ಶನಕ್ಕೆ ಅವಕಾಶವು ದೊರೆಯಲಿಲ್ಲವೇನೋ ಎಂದು **ಯೋಚಿಸತೊಡಗಿದಾಗ, ಪ್ರಖ್ಯಾತ ವ್ಯಾಕರಣ ಪಂಡಿತನೆಂದೆನಿಸಿಕೊಂಡ**

ಪಾಣಿನಿಯ ಕೃತಿರಚನೆಯ ಬಗ್ಗೆಯೂ ನಾವು ಕಣ್ಣಾಡಿಸಬೇಕಾಗುವದು. ಕೆಲ ಸಂದರ್ಭಗಳಲ್ಲಿ ಪ್ರತಿಭೆಯ ಪ್ರಕಾಶವು ಮೋಹಕವಾಗಿ ತೋರುವದುಂಟು. ಪಾಣಿನಿಯ ಸಂಧ್ಯಾಕಾಲದ ವರ್ಣನೆಯು ಈ ಮಾತಿಗೆ ಸಾಕ್ಷಿಯಾಗಿ ತೋರುವದು.

*ಉಪೋಢರಾಗೇಣ ವಿಲೋಲ ತಾರಕಂ*
*ತಥಾ ಗೃಹೀತಂ ಶಶಿನಾ ನಿಶಾಮುಖಮ್*
*ತಥಾಸಮಸ್ತಂ ತಿಮಿರಾಂಶುಕಂ ತಥಾ*
*ಪುರೋಽಪಿ ರಾಗಾದ್ಗಲಿತಂ ನ ಲಕ್ಷಿತಂ ॥*

ಇಲ್ಲಿ ಶಶಿ ಎಂದರೆ ಚಂದ್ರಮ. ಆತನು ರಾತ್ರಿಯನ್ನು ಕಂಡು ಎಷ್ಟೊಂದು ಮುಗ್ಧನಾದನೆಂದರೆ, ಸಂಧ್ಯಾಕಾಲದ ಅನುರಾಗದಿಂದ ವಿಹ್ವಲನಾಗಿ ಆತನ ಸಮೀಪಕ್ಕೆ ಬಂದು ಪ್ರೇಮದ ಭರದಲ್ಲಿ ಕತ್ತಲೆಯ ಲಲಾಟವನ್ನು ಸ್ಪರ್ಶಮಾಡಿ ಆ ಕತ್ತಲೆಯನ್ನು ಮೇಲೆತ್ತಲು ಯತ್ನಿಸಿದ. ತನ್ನ ಪ್ರೀಯತಮನ ಸ್ಪರ್ಶದಿಂದಾಗಿ ಕತ್ತಲೆ ಎಷ್ಟೊಂದು ಮೈಮರೆಯಿತೆಂದರೆ ತನ್ನ ಮೈಮೇಲಿನ ಕಪ್ಪು ವಸ್ತ್ರವು ಯಾವಾಗ ಕಳಚಿ ಹೋಯಿತೆಂಬುದೇ ಅದಕ್ಕೆ ತಿಳಿಯಲಿಲ್ಲ. ಚಂದ್ರನ ಉದಯದಿಂದಾಗಿ ಬೆಳದಿಂಗಳು ಪ್ರಕಾಶಮಾನ ವಾಯಿತು. ಓರ್ವ ವ್ಯಾಕರಣ ಪಂಡಿತನಿಂದ ಹೊರಹೊಮ್ಮಿ ಬಂದ ಈ ಕಲ್ಪನೆಯು ಎಂಥವರ ಮನವನ್ನೂ ಮುಗ್ಧಗೊಳಿಸದಿರದು.

ಆನಂತರದಲ್ಲಿ ಬಂದ ಕಾಳಿದಾಸನು ಖಂಡ ಕಾವ್ಯವನ್ನು ರಚನೆ ಮಾಡಿದ. ಕಾವ್ಯದಲ್ಲಿ ನಿಬದ್ಧ ಹಾಗೂ ಅನಿಬದ್ಧ ಎಂದು ಎರಡು ಪ್ರಕಾರಗಳುಂಟು. ನಿಬದ್ಧ ಕಾವ್ಯವೆಂದರೆ ಸ್ಫುಟಕಾವ್ಯ. ಇದರಲ್ಲಿ ಕಾಳಿದಾಸನ ಋತುಸಂಹಾರ ಹಾಗೂ ಮೇಘದೂತ ಕಾವ್ಯಗಳು ಖಂಡಕಾವ್ಯಗಳೆನಿಸಿವೆ. ಕುಮಾರಸಂಭವ, ರಘುವಂಶ, ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಅಭಿಜ್ಞಾನ ಶಾಕುಂತಲ ಇವು ನಾಟಕಗಳಾಗಿವೆ. ಇವುಗಳಲ್ಲದೆ ಕುಂತಲೇಶ್ವರದೌತ್ಯ ಎಂಬ ಕಾವ್ಯವನ್ನೂ ಸಹ ಕಾಳಿದಾಸನು ತಿದ್ದಿ ಶುದ್ಧ ಮಾಡಿ ಕೊಟ್ಟನೆಂದು ಅನೇಕ ವಿಮರ್ಶಕರ ಅಭಿಪ್ರಾಯವಿದೆ.

ಕಾಲಿದಾಸನಿಂದ ಅಮೋಘ ಕೃತಿಗಳನ್ನು ನಾವು ಪಡೆದುಕೊಂಡಿದ್ದೇವೆ. ಒಂದು ವೇಳೆ ಮೇಘದೂತ ಕಾವ್ಯ ಒಂದನ್ನೇ ರಚಿಸಿದ್ದರೂ ಆತನ ಕೀರ್ತಿ ಅಜರಾಮರವಾಗುತ್ತಿತ್ತು. ಕೇವಲ ರಘುವಂಶವನ್ನಿತ್ತಿದ್ದರೂ ಆತನೊಬ್ಬ ಮಹಾಕವಿ ಎಂದೆನಿಸಿಕೊಳ್ಳುತ್ತಿದ್ದ. ಇಲ್ಲವೆ ಅಭಿಜ್ಞಾನ ಶಾಕುಂತಲದಂತಹ ಒಂದೇ ಒಂದು ನಾಟಕವನ್ನಿತ್ತಿದ್ದರೂ ಆತನೊಬ್ಬ ಪ್ರಸಿದ್ಧ ನಾಟಕಕಾರನೆಂದು ಖ್ಯಾತನಾಗುತ್ತಿದ್ದ. ಅಂದು ನಾಟಕಗಳ ರಚನೆ ಅಷ್ಟೊಂದು ಪ್ರಾಮುಖ್ಯತೆಯನ್ನು ಹೊಂದಿರಲಿಲ್ಲ. ಕಾಳಿದಾಸನಿಂದ ರಚಿತವಾದ ನಾಟಕಗಳು ಮೂರು. ಈತನಂತೆ ಭವಭೂತಿಯೂ ಸಹ ಮೂರು ನಾಟಕಗಳನ್ನು ಬರೆದಿದ್ದಾನೆ. ಅದರಂತೆ ವಿಶಾಖದತ್ತನ ಒಂದು ನಾಟಕ ಮುದ್ರಾರಾಕ್ಷಸ, ಭಟ್ಟನಾರಾಯಣನ ವೇಣೀ ಸಂಹಾರ ನಾಟಕ, ಶೂದ್ರಕನ ಒಂದೇ ಒಂದಾದ ಮೃಚ್ಛಕಟಿಕ ನಾಟಕ, ಇವೆಲ್ಲ ಒಂದೊಂದೇ ಕೃತಿಗಳೆನಿಸಿದರೂ ಸಹ ಆ ನಾಟಕಗಳನ್ನೊದಗಿಸಿದ ಕರ್ತೃಗಳು ಸಾಹಿತ್ಯ ಲೋಕದಲ್ಲಿ ಅಜರಾಮರ ಕೀರ್ತಿಯನ್ನು ಗಳಿಸಿದ್ದಾರೆ.

ಮಹಾಕವಿಯಾದ ಕಾಳಿದಾಸನ ಜೀವನ ವೃತ್ತಾಂತವೆಲ್ಲವೂ ಅಭ್ಯಾಸಕ್ಕೆ ಬಹು ಯೋಗ್ಯವಾದ ವಿಷಯ. ಏಕೆಂದರೆ ಆತನ ವಿಚಾರದಲ್ಲಿ ನಿಖರವಾದ ಹೆಚ್ಚಿನ ಮಾಹಿತಿಗಳು ಇಂದಿಗೂ ಉಪಲಬ್ಧವಾಗಿಲ್ಲ. ಈ ವಿಚಾರದಲ್ಲಿ ಸ್ವತಃ ಆತನೇ ನಿರ್ಲಕ್ಷಿ ಎಂದೆನಿಸುವದು. ಅಸಾಮಾನ್ಯವೆನಿಸಬಹುದಾದ ಸಾಹಿತ್ಯ ಪ್ರೇಮಿಗಳಿಗೆ ರಸದೌತಣವನ್ನೀಯುವಂಥ ಕೃತಿ ರಚನೆ ಮಾಡಿದ ಈತನು ತನ್ನ ಸ್ವಂತದ ವಿಚಾರದಲ್ಲಿ ಮಾತ್ರ ಅತಿ ಮೌನಿ ಎಂದೆನಿಸಿ ಕೊಳ್ಳುವನು. ಕಾಲದ ಪರಿವರ್ತನೆಯನ್ನುಸಾಕ್ಷಾತ್ಕರಿಸಿಕೊಂಡು ನಂತರವೂ ಸಹ ಈ ಮಾಹನುಭಾವನ ವ್ಯಕ್ತಿತ್ವದ ವಿಚಾರದಲ್ಲಿ ಯಾವ ಸಮಾಧಾನವೂ ದೊರಕದೆ ಕತ್ತಲೆಯಲ್ಲಿದ್ದಂತಹ ಅನುಭವವಾಗುವದು. ಆದರೂ ಸಹ ಒಂದು ಮಾತಿಗಾಗಿ ಆತನನ್ನೂ ನಾವು ಮೆಚ್ಚಲೇಬೇಕಾಗುವದು. ಕೃತಿರಚನೆಗಳಿಂದ ನಮಗೆ ತನ್ನ ಹೆಸರನ್ನಂತೂ ಆತನು ಅನುಗ್ರಹಿಸಿರುವ ಮಂಟು.

ಭಾಸಕವಿಯೂ ಸಹ ತನ್ನ ಜೀವನದ ಇತಿಮಿತಿಗಳನ್ನು ಹೇಳಿಕೊಂಡಿಲ್ಲ. ಈತ ಕಾಳಿದಾಸನಿಗಿಂತ ಮೊದಲೇ ಆಗಿ ಹೋದ ಶ್ರೇಷ್ಠ ನಾಟಕಕಾರನೆನಿಸುವನು. ಭಾಸನಷ್ಟು ನಾಟಕಗಳನ್ನು ಬೇರಾರೂ ಬರೆದಿರುವದಿಲ್ಲ. ಆತನು ಹದಿಮೂರು ನಾಟಕಗಳನ್ನು ರಚಿಸಿದ್ದಾನೆ. ಇನ್ನು ಯಜ್ಞಫಲ ನಾಟಕವೂ ಸಹ ಭಾಸನಿಂದಲೇ ರಚಿತವಾದುದು ಎಂಬ ಮಾತು ನಿರ್ಧಾರವಾದಲ್ಲಿ ಆಗ ಆತನ ನಾಟಕಗಳ ಸಂಖ್ಯೆ ಹದಿನಾಲ್ಕರಷ್ಟಾಗುತ್ತದೆ. ಏಕಾಂಕ ನಾಟಕಗಳನ್ನು ಭಾರತೀಯ ರಂಗಭೂಮಿಯಲ್ಲಿ ಪ್ರಯೋಗ ಮಾಡಿ ತೋರಿಸಿದವನೂ ಸಹ ಭಾಸನೇ. ಭಾಸನ ಪಾತ್ರಗಳು ಬಹು ವೈಚಿತ್ರಪೂರ್ಣ ಹಾಗೂ ಅನುಭವಜನ್ಯ ಪಾತ್ರಗಳಾಗಿವೆ. ಇಂಥ ಪಾತ್ರಗಳನ್ನು ನಾವು ಬೇರಾವ ನಾಟಕಕಾರರಲ್ಲಿ ಕಾಣುವದಿಲ್ಲ. ಶೂದ್ರಕನ ಮೃಚ್ಛಕಟಿಕ ನಾಟಕವನ್ನು ನಾವು ಬಹು ಪ್ರಶಂಸಿತ್ತೇವೆ, ಮೆಚ್ಚುತ್ತೇವೆ. ನಿಜ. ಆದರ ಸಂಪೂರ್ಣ ಶ್ರೇಯಸ್ಸು ಭಾಸನ ಚಾರುದತ್ತ ನಾಟಕದ ಭಾವವನ್ನೇ ಹೋಲುತ್ತದೆ. ಈ ಮಾತು ಮನವರಿಕೆಯಾದಲ್ಲಿ ಭಾಸಕವಿಯು ಎಂಥ ದೊಡ್ಡ ನಾಟಕಕಾರನೆಂಬ ನಿರ್ಧಾರಕ್ಕೆ ನಾವು ಬಂದು ನಿಲ್ಲುತ್ತೇವೆ. ಭಾಸನ ಚಾರುದತ್ತ ನಾಟಕದಲ್ಲಿ ನಾಲ್ಕು ಅಂಕಗಳಿವೆ. ಶೂದ್ರಕನ ಮೃಚ್ಛಕಟಿಕ ನಾಟಕದಲ್ಲಿಯೂ ನಾಲ್ಕು ಅಂಕಗಳಿವೆ. ಇವೆರಡನ್ನೂ ನಾವು ಸರಿಯಾದ ರೀತಿಯಲ್ಲಿ ತುಲನೆ ಮಾಡಿ ನೋಡಿದಾಗ ಅವುಗಳಲ್ಲಿರುವ ಸಾಮ್ಯತೆಯನ್ನು ಕಾಣಬಹುದಾಗಿದೆ. ಅನೇಕ ಪ್ರೇರಣೆಯನ್ನೀಯುವ ಸಾಮರ್ಥ್ಯ ಅಥವಾ ಸನ್ನಿವೇಶಗಳನ್ನು ನಾವು ಭಾಸನ ನಾಟಕಗಳಲ್ಲಿ ಕಾಣಬಹುದು.

ಕಾಳಿದಾಸನಿಗಿಂತ ಪೂರ್ವದಲ್ಲಾಗಿ ಹೋದ ಭಾಸಕವಿಯು ಬಹು ಕಾಲದವರೆಗೆ ಅಜ್ಞಾತಾ ವಸ್ಥೆಯಲ್ಲಿಯೇ ಇದ್ದ. ಆತನ ಸ್ವಪ್ನವಾಸವದತ್ತಾ ಈ ನಾಟಕವಂತೂ ಎಲ್ಲರ ಮನವನ್ನಾಕರ್ಷಿಸಿತ್ತು. ಆದರೆ ಆತನಂತೆ ನಿಷ್ಠುರವಾದ ಮೌನವನ್ನು ಕಾಳಿದಾಸನೂ ಅನುಸರಿಸಿದ. ತನ್ನ ಸ್ವಂತದ ವಿಚಾರವನ್ನು ಸ್ವಲ್ಪವು ಹೇಳಿಕೊಂಡಿಲ್ಲ. ಆದುದರಿಂದ ಸಂಶೋಧಕರು ಅನೇಕ ಪ್ರಕಾರವಾಗಿ ತಮಗಪೇಕ್ಷಿತವಾದ ರೀತಿಯಲ್ಲಿ ಆತನ ವಿಚಾರದಲ್ಲಿ

ಸುಲಭವಾಗಿ ಕಥೆಯನ್ನು ಕಟ್ಟುತ್ತ ಹೋಗಿದ್ದಾರೆ. ಇಂದು ಈ ಕವಿಯ ವಿಚಾರವಾಗಿ ನಿರ್ಣಾಯಕವಾದ ಸತ್ಯದ ಭಂಡಾರವನ್ನು ತೆಗೆದಿಡುವ ಪ್ರಯತ್ನವನ್ನು ಮಾಡಬೇಕಾಗಿದೆ.

ಕಾಳಿದಾಸನ ಕಾಲವನ್ನು ಕುರಿತು ನಿಶ್ಚಿತವಾಗಿ ಹೇಳಲು ಬರುವಂತಿಲ್ಲ. ಆದರೂ ಸಹ ಕ್ರಿ.ಪೂ. ಎರಡನೇ ಶತಮಾನದಿಂದ ಕ್ರಿಸ್ತೋತ್ತರ ಆರನೇ ಶತಮಾನದವರೆಗೆ ಆತನು ಆಗಿ ಹೋಗಿರಬಹುದು. ಆತನು ಪ್ರಖ್ಯಾತ ನಾಟಕಕಾರನೆನಿಸಿದರೂ ಸಹ ಆತನ ಜನ್ಮವು ಹೇಗಾಯಿತು? ಎಂದಾಯಿತೆಂಬುದೇ ನಮಗೆ ತಿಳಿದು ಬರುವುದಿಲ್ಲ. ಒಂದು ವೇಳೆ ಸಂಶೋಧಕರು ಪ್ರಾಮಾಣಿಕ ಪ್ರಯತ್ನ ಮಾಡಿದಾಗಲೂ ಸಹ ಆತನ ಕಾಲ ಯಾವುದು? ಆತ ಇದ್ದನೋ ಅಥವಾ ಇಲ್ಲವೋ ಎಂಬ ಅನೇಕ ಪ್ರಶ್ನೆಗಳಿಗೆ ಆತನಿಂದ ರಚಿತವಾದ ಮಾಲವಿಕಾಗ್ನಿಮಿತ್ರ ಎಂಬ ನಾಟಕದ ಕೃತಿಯಿಂದಲೇ ಚಿಂತಕರು ಸ್ವಲ್ಪ ಮುಂದರಿಯಬಹುದಾದ ಸಾಧ್ಯತೆಗಳಿವೆ. ಇದು ವಿದಿಶಾದ ರಾಜನಾಗಿದ್ದ ಅಗ್ನಿಮಿತ್ರನ ಪ್ರೇಮಜೀವನವನ್ನಾಧರಿಸಿದ ನಾಟಕವೆನಿಸಿದೆ. ಅಗ್ನಿಮಿತ್ರನು ಪುಷ್ಯಮಿತ್ರ ಶೃಂಗನ ಮಗನಾಗಿದ್ದ. ಈತ ಐತಿಹಾಸಿಕ ರಾಜಪುರುಷನಾಗಿದ್ದ. ಈತ ಮೌರ್ಯ ವಂಶದ ಕೊನೆಯ ಅರಸನಾದ ಬೃಹ್ಮದತ್ತನನ್ನು ಮೋಸದಿಂದ ಹತ್ಯೆ ಮಾಡಿ ಮೌರ್ಯ ವಂಶದ ರಾಜಸತ್ತೆಯನ್ನು ತನ್ನದಾಗಿ ಮಾಡಿಕೊಂಡ. ತನ್ನ ಆಡಳಿತದಲ್ಲಿ ಈತನು ಎರಡು ಸಲ ಅಶ್ವಮೇಧ ಯಾಗವನ್ನು ಮಾಡಿದನೆಂದು ಶಿಲಾಲೇಖಗಳು ತಿಳಿಸುವವು. ಅಗ್ನಿಮಿತ್ರನ ಕಾಲವನ್ನು ಕ್ರಿಸ್ತಪೂರ್ವ ನೂರೈವತ್ತು ವರುಷಗಳ ಹಿಂದಿನ ಕಾಲವೆಂದು ಪಂಡಿತರು ಅಭಿಪ್ರಾಯ ಪಡುತ್ತಿದ್ದಾರೆ. ಆದುದರಿಂದ ಅಗ್ನಿಮಿತ್ರನ ಕಾಲ ಹಾಗೂ ಕಾಲಿದಾಸನ ಕಾಲವು ಹೊಂದುವದಿಲ್ಲ. ಬಾಣಭಟ್ಟನ ಹರ್ಷಚರಿತದಲ್ಲಿ ಪೂರ್ವ ಸೂರಿಯನ್ನು ಕುರಿತು ಆತನು ಸ್ಮರಿಸಿಕೊಂಡಿದ್ದಾನೆ. ಅದರಲ್ಲಿ ಕಾಳಿದಾಸನ ಹೆಸರೂ ಇದೆ. ಹೀಗಿರುವಾಗ ಕಾಳಿದಾಸನು ಬಾಣಭಟ್ಟನಿಗಿಂತ ಮೊದಲೇ ಆಗಿ ಹೋಗಿರಬಹುದಾದ ಸಾಧ್ಯತೆಗಳಿವೆ. ಬಾಣಭಟ್ಟ ಹರ್ಷವರ್ಧನ ಕಾಲದವನು. ಹರ್ಷವರ್ಧನನ

ಕಾಲವು ಕ್ರಿಸ್ತೋತ್ತರ ಅರುನೂರಾ ಇಪ್ಪತ್ತು. ದುರ್ದೈವದಿಂದ ಭಾರತದಲ್ಲಿ ಇತಿಹಾಸದ ನಿಖರವಾದ ದಾಖಲೆಗಳು ದೊರೆಯುತ್ತಿಲ್ಲ. ನಮ್ಮ ಜನಗಳಲ್ಲಿ ಐತಿಹಾಸಿಕ ದೃಷ್ಟಿ ಬಹು ಕಡಿಮೆ ಎಂದೇ ಹೇಳಬೇಕಾಗುವದು. ''ಪೂಜಯಂಶ್ಚ ಪಠಕ್ಷೇತಂ ಇತಿಹಾಸ ಪುರಾತನಮ್'' ಎಂಬ ಮಾತನ್ನು ನಾವು ರಾಮಾಯಣದ ಯುದ್ಧಕಾಂಡದಲ್ಲಿ ಕಾಣುವೆವು. ''ಜಯ ನಮೋ ಇತಿಹಾಸೋಯಂ'' ಎಂಬ ಮಾತನ್ನು ಮಹಾಭಾರತದಲ್ಲಿ ಕಾಣುವೆವು. ಆದರೂ ಸಹ ಇತಿಹಾಸವು ನಿಶ್ಚಿತವಾಗಿ ಎಂದು ಘಟಿಸಿದವು ಎಂಬ ಮಾತನ್ನು ಕರಾರುವಾಕ್ಕಾಗಿ ಹೇಳಲು ನಮ್ಮಲ್ಲಿ ಸಾಕ್ಷಿ ಆಧಾರಗಳು ದೊರೆಯುವದಿಲ್ಲ. ರಾಜತರಂಗಿಣಿಯ ಹೊರತಾಗಿ ಯಾವ ಇತಿಹಾಸ ಗ್ರಂಥವೂ ಇಲ್ಲ. ಬಾಣಭಟ್ಟನಿಂದ ರಚಿತವಾದ ಹರ್ಷಚರಿತೆಯಲ್ಲಿಯೂ ನಿಖರವಾದ ಕಾಲ ಸೂಚಿಯು ದೊರೆಯುವುದಿಲ್ಲ. ''ಕಾಸ್ಮಿಶ್ಚಿತ್ ದಿವಸ'' ಎಂದಾದರೊಂದು ದಿನ ಈ ಘಟನೆ ನಡೆಯಿತು. ''ಅಥ ಕೇಚಿದಾನಿ ದಿನಾನಿ ಗತ್ವಾ'' ಎಷ್ಟೋ ದಿನಗಳಾದ ಮೇಲೆ. ಹೀಗೆಲ್ಲ ಹೇಳಿದರೆ ನಡೆದ ಘಟನೆ ನಿರ್ದಿಷ್ಟವಾಗಿ ಹೇಳಿದಂತಾದೀತೆ? ಸುದೈವದಿಂದ ಚೀನದ ಪ್ರವಾಸಿ ಹ್ಯೂಎನ್‌ಥಾಂಗ ಎಂಬಾತನು ಭಾರತದ ಪ್ರವಾಸಕ್ಕೆಂದು ಬಂದಾಗ ಆತನು ಮಾಡಿಟ್ಟ ಟಿಪ್ಪಣಿಗಳ ಆಧಾರದಿಂದ ಅಲ್ಪಸ್ವಲ್ಪ ಮಾಹಿತಿಯು ದೊರೆಯಬಹುದಾಗಿದೆ. ಹರ್ಷಚರಿತೆಯ ಕಾಲವನ್ನು ನಿರ್ಧರಿಸಲು ಬರುತ್ತದೆ. ಇ.ಸ. 620 ರಿಂದ ಅಥವಾ 620 ಕ್ಕಿಂತ ಮೊದಲು ಕಾಳಿದಾಸನ ಕಾಲವೆಂದು ಹೇಳಲು ಬರುವುದಿಲ್ಲ. ಇನ್ನು ಇ.ಸ. 150ಕ್ಕಿಂತಹಿಂದಿನ ಕಾಲಕ್ಕೂ ಆತನನ್ನು ತೆಗೆದುಕೊಂಡು ಹೋಗುವಂತಿಲ್ಲ.

ಕಾಳಿದಾಸನು ವಿಕ್ರಮಾದಿತ್ಯನ ಆಶ್ರಯದಲ್ಲಿದ್ದನು. ಇದರಲ್ಲಿ ಇಬ್ಬರು ವಿಕ್ರಮಾದಿತ್ಯರು. ಇದರಲ್ಲಿಯ ಒಬ್ಬ ವಿಕ್ರಮಾದಿತ್ಯನು ಶಕಶತ (ಶಕಾರಿ) ನಾಗಿದ್ದ. ಈತ ಶಶಾಂಕನನ್ನು ಪರಾಭವಗೊಳಿಸಿದ. ಶಕಾರಿ ವಿಕ್ರಮಾದಿತ್ಯನೆಂದರೆ ಎರಡನೇ ಚಂದ್ರಗುಪ್ತ. ಈ ಎರಡನೇ ಚಂದ್ರಗುಪ್ತನ ಕಾಲವು ಇ.ಸ. 380 ರಿಂದ 413 ಎಂದು ಊಹಿಸಿದಲ್ಲಿ ಆಗ ಮಾತ್ರ

ಕಾಳಿದಾಸನ ಕಾಲವು 380 ರಿಂದ 410 ರವರೆಗಿರಬಹುದು ಎಂದು ಕೆಲವು ಸಂಶೋಧಕರಲ್ಲಿ ಚರ್ಚೆ ಆರಂಭವಾಗಿರುವದು. ಇಂಥ ಮಹಾಕವಿಯೊಬ್ಬನು ನಮ್ಮ ನಾಡಿನಲ್ಲಿ ಜನಿಸಿದನೆಂದು ಹೇಳಿಕೊಳ್ಳುವ ಮೋಹವನ್ನೂ ಸಹ ನಾವು ಅನೇಕ ರೀತಿಯಲ್ಲಿ ಕಾಣುತ್ತೇವೆ. ಕಾಳಿದಾಸನ ಎಂಬ ಹೆಸರೇ ಬಂಗಾಲ ಮೂಲದ್ದು. ಆತನು ಕಾಳಿಯ ಉಪಾಸಕನಾಗಿದ್ದುದರಿಂದ ಆತನು ಬಂಗಾಲದವನು. ಎಂದು ವಂಗ ಬಂಧುಗಳು ತಮ್ಮ ಅಭಿಮಾನದ ಹಕ್ಕನ್ನು ಮುಂದಿಡುವರು. ಕಾಳಿದಾಸನ ಹೆಸರಿನಿಂದ ಕಾರ್ತಿಕ ಮಾಸದಲ್ಲಿ ತಾವು ಬಹು ದೊಡ್ಡ ಉತ್ಸವವನ್ನಾಚರಿಸುವದಾಗಿಯೂ ಹೇಳುವರು. ಕಾಳಿದಾಸನ ಸ್ಥಾನವನ್ನು ಮುರ್ಶಿದಾಬಾದ ಜಿಲ್ಲೆಯ ಗಡ್ಡಸಿಂಗರು ಎಂಬಲ್ಲಿದೆ ಎಂದು ಪ್ರತಿವಾದಿಸುವದೂ ಉಂಟು.

ಕಾಶ್ಮೀರ ಭಾಗದಲ್ಲಿ ಅನೇಕ ಪ್ರತಿಭಾಸ್ಮಿತ ಪಂಡಿತರು ಜನ್ಮ ತಾಳಿರುವುದರಿಂದಲೂ, ಈತನು ನಿಸರ್ಗಪ್ರಿಯ ಕವಿಯಾಗಿರುವುದರಿಂದಲೂ ಹಾಗೂ ಒಳ್ಳೆ ಇತಿಹಾಸಕಾರರಿಗೂ ಶಾಸ್ತ್ರಜ್ಞರಿಗೂ ಅಲಂಕಾರ, ಮೀಮಾಂಸಾದಿ ಗ್ರಂಥಗಳನ್ನು ರಚಿಸಿದ ಒಳ್ಳೆ ತತ್ವಜ್ಞಾನಿ ಎಂದೆನಿಸಿಕೊಂಡ ಅಭಿನವಗುಪ್ತನೂ ಸಹ ಕಾಶ್ಮೀರದವನಾಗಿರುವುದರಿಂದಲೂ, ಕಾಳಿದಾಸನ ಕಾವ್ಯದಲ್ಲಿ ಹಿಮಾಲಯದ ಮನೋಹರವಾದ ವರ್ಣನೆಗಳಿರುವುದರಿಂದಲೂ, ಈ ಭಾಗದ ಸ್ಥಳಗಳನ್ನೆಲ್ಲ ಬಹು ನಿಖರವಾಗಿ ಆತನು ವರ್ಣನೆ ಮಾಡಿರುವುದರಿಂದಲೂ, ಕವಿಯು ಮೇಘದೂತ ಕಾವ್ಯದಲ್ಲಿರುವ ನಾಯಕನ ಸ್ಥಳವನ್ನು ಅಲಕಾನಗರಿ ಎಂದು ಹೇಳಿರುವುದರಿಂದಲೂ, ಆ ಸ್ಥಳವು ಹಿಮಾಲಯದ ತಪ್ಪಲು ಪ್ರದೇಶದಲ್ಲಿರುವುದರಿಂದಲೂ, ಕುಮಾರಸಂಭವದಲ್ಲಿಯ ನಾಯಕಿಯು ಹಿಮಾಲಯದ ಕನ್ಯೆಯಾಗಿರುವುದರಿಂದಲೂ, ಶಂಕರ ಪಾರ್ವತಿಯರ ಪ್ರಥಮ ಪರಿಚಯ ಹಾಗೂ ಪ್ರಣಯ ಅವರಿಬ್ಬರ ಸನ್ಮುಖದಲ್ಲಿ ನಡೆದ ವಿವಾಹದ ವರ್ಣನೆ ಇವೆಲ್ಲವುಗಳ ಆಧಾರದಿಂದಲೂ, ಕಾಶ್ಮೀರ ನಿವಾಸಿಗಳು ಮಹಾಕವಿ

ಕಾಳಿದಾಸನು ಕಾಶ್ಮೀರದವನು ಎಂದು ಬಲು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಇದು ಸಂತೋಷದ ವಿಷಯ.

ವಿಕ್ರಮೋರ್ವಸೀಯ ನಾಟಕದಲ್ಲಿ ಊರ್ವಸಿ ಹಾಗೂ ಕಾರ್ತಿಕೇಯರ ಭೇಟಿ ಸುಂದರವಾದ ವನದಲ್ಲಾಯಿತು. ಕಾರ್ತಿಕೇಯನ ವನವು ಹಿಮಾಲಯದ ಗಂಧಮಾದನ ಪರ್ವತ ಪ್ರದೇಶದಲ್ಲಿರುವುದು. ಅದೇ ಸ್ಥಳದಲ್ಲಿ ಪುರೂರವ ಹಾಗೂ ಊರ್ವಶಿಯರ ಭೇಟಿಯಾಗಿ ಅವರಿಬ್ಬರೂ ವನವಿಹಾರ ಮಾಡಿದರು. ಶಕುಂತಲಾ ನಾಟಕದಲ್ಲಿ ಬರುವ ಶಚೀತೀರ್ಥ, ಶಕ್ರಾವತಾರ ಮೊದಲಾದ ಸ್ಥಳಗಳು ಹಿಮಾಲಯದಲ್ಲಿವೆ. ಇದರಿಂದಾಗಿ ಕಾಲಿದಾಸನು ಕಾಶ್ಮೀರದವನೆಂಬ ಮಾತಿಗೆ ಅಲ್ಲಿಯ ಜನತೆ ಪುಷ್ಟಿಯನ್ನೀಯುವದುಂಟು. ಅವರು ಹೇಳಿಕೊಳ್ಳಬಹುದಾದ ಅನೇಕ ಸಂದರ್ಭಗಳೂ ಸಹ ಆತನ ಕೃತಿಯಲ್ಲಿವೆ. ಆದರೆ ಅಂದಿನ ಇಂದಿನ ಕಾಶ್ಮೀರದ ಪರಿಸರದ ಸ್ಥಿತಿಗತಿಗಳು ಹೇಗಿದೆ ಎಂದು ಯೋಚಿಸ ತೊಡಗಿದಾಗ ಮಹಾಕವಿಯನ್ನು ಕಾಶ್ಮೀರಕ್ಕೊಪ್ಪಿಸಲು ಎಂಥವನ ಮನವೂ ಒಪ್ಪದಿರಬಹುದು. ಒಂದು ಮಾತಂತೂ ಸತ್ಯ. ಕಾಶ್ಮೀರದ ನಿವಾಸಿಗಳ ಭಾಗ್ಯವೇ ಭಾಗ್ಯ ಎಂದು ಹೇಳಿದರೆ ತಪ್ಪೆನಿಸಲಾರದು.

ಕಾಳಿದಾಸನು ವಿದರ್ಭ ಪ್ರದೇಶದವನು. (ಹಂಶಾ) ಇದಕ್ಕೆ ಮೂಲ ಕಾರಣ ಆತನ ಮೇರು ಕೃತಿ ಎಂದೆನಿಸಿಕೊಳ್ಳುವ ಮೇಘದೂತ ಕಾವ್ಯ. ಈ ಕೃತಿಯು ನಾಗಪುರದಿಂದ ತೀರ ಹತ್ತಿರದಲ್ಲಿರುವ ರಾಮಗಿರಿ ಅಥವಾ ರಾಮಟೇಕ್ ಎಂಬಲ್ಲಿದೆ. ಈ ಪರ್ವತದ ಮೇಲ್ಭಾಗದಲ್ಲಿ ಶ್ರೀರಾಮಚಂದ್ರನ ಪುರಾತನ ದೇವಾಲಯವಿದೆ. ಪರ್ವತದ ತುದಿಭಾಗದಲ್ಲಿ ಹೋಗಿ ನಿಂತುಕೊಂಡಾಗ ಮೋಡಗಳು ಮೈಗಂಟಿಕೊಂಡು ಚಲಿಸುವ ಅನುಭವವನ್ನು ನಾವು ಇಂದಿಗೂ ಅನುಭವಿಸಬಹುದಾದ ಸ್ಥಳವಾಗಿದೆ. (ಸ್ವತಃ ಈ ಲೇಖಕನು ಒಂದು ದಿನವನ್ನು ಆ ಪರ್ವತದಲ್ಲಿ ಕಳೆದಿದ್ದಾನೆ). ಕವಿಯು ಆ ಉನ್ನತವಾದ ಗಿರಿಯ ತುದಿಭಾಗದಲ್ಲಿ ನಿಂತು ತನ್ನ ಸಂದೇಶವನ್ನು ಪ್ರೀಯ ಪತ್ನಿಗೆ ಮುಟ್ಟಿಸುವಂತೆ ಪ್ರಾರ್ಥನೆ ಮಾಡಿಕೊಳ್ಳುತ್ತಾನೆ. ಮಹಾರಾಷ್ಟ್ರ

ಸರಕಾರದವರು ಈ ಮಹಾಕಾವ್ಯವು ನಿರ್ಮಾಣಗೊಂಡ ಆ ಗಿರಿ ಶಿಖರದ ಮೇಲೆ ಇಂದು ಒಂದು ಸುಂದರವಾದ ಮಂಟಪವನ್ನು ಕಟ್ಟಿದ್ದಾರೆ. ಆ ಮಂಟಪದಲ್ಲಿ ಮೇಘದೂತ ಕಾವ್ಯದ ಅನೇಕ ಭಾಗಗಳನ್ನು ಕಲ್ಲಿನಲ್ಲಿ ಕೆತ್ತಿಸಿದ್ದಾರೆ. ಆತನು ವಿದರ್ಭ ಪ್ರದೇಶದವನೆಂಬುದಕ್ಕೆ ಕೆಲವು ಉದಾಹರಣೆಗಳೂ ದೊರೆಯುತ್ತವೆ. ಪಾಂಚಾಲ ದೇಶದ ರಾಜನ ಮಗಳಾದ ದ್ರೌಪದಿ ಅಥವಾ ಕೃಷ್ಣೆ ವಿದರ್ಭದಳು. ವಿದರ್ಭ ನೀತಿ ಬಹು ಪ್ರಸಿದ್ಧ. ಮಾಲವಿಕಾಗ್ನಿಮಿತ್ರ ನಾಟಕದಲ್ಲಿ ಉಲ್ಲೇಖಿಸಲ್ಪಟ್ಟ ನಾಯಕ ಅಗ್ನಿಮಿತ್ರನು ಬೇರೆ ಪ್ರದೇಶದ ರಾಜಪುತ್ರನಾಗಿರಬಹುದು. ಆ ನಾಟಕದಲ್ಲಿಯ ನಾಯಕಿಯು ಮಾತ್ರ ವಿದರ್ಭ ರಾಜಕನ್ಯೆಯಾಗಿದ್ದಳು. ಅಂದಿನ ಕಾಲದಲ್ಲಿ ಸೌಂದರ್ಯಕ್ಕಾಗಿ ವಿದರ್ಭದ ರಾಜಕನ್ಯೆಯರು ಬಹು ಪ್ರಸಿದ್ಧರಾಗಿದ್ದರು. ಕಾಳಿದಾಸನು ವಿದರ್ಭದ ಎರಡು ವಿವಾಹಗಳನ್ನು ವರ್ಣನೆಮಾಡಿರುವುದುಂಟು. ರಘುವಂಶದಲ್ಲಿ ಇಂದುಮತಿಯ ಸ್ವಯಂವರದ ವರ್ಣನೆ ಇದೆ. ಇವಳೂ ವಿದರ್ಭದ ರಾಜಕನ್ಯೆ ಶ್ರೀರಾಮಚಂದ್ರನ ಅಜ್ಜಿ, ದಶರಥಮಹಾರಾಜನ ತಾಯಿ ಹಾಗೂ ಇಂದುಮತಿ ಇವರೆಲ್ಲರೂ ವಿದರ್ಭದ ರಾಜಕನ್ಯೆಯರೇ. ಕಾಲಿದಾಸನಿಗೆ ವಿದರ್ಭ ದೇಶವು ಎಷ್ಟು ಆಕರ್ಷಣೀಯವಾಗಿತ್ತೆಂಬ ಬಗ್ಗೆ ಆತನ ಕೃತಿಗಳೇ ಆಧಾರವಾಗಿರುವವು. ಕಾಳಿದಾಸ ವಿದರ್ಭದವನಾದರೆ ಅಗ್ನಿಮಿತ್ರ ವಿದಿಶೆಯ ರಾಜಕುಮಾರ್. ಹೀಗಾಗಿ ಅಲ್ಲಿಯ ಪರಿಸರವು ಕವಿಗೆ ಸ್ಫೂರ್ತಿಯ ತಾಣವಾಗಿತ್ತೆಂದು ಹೇಳಿದರೆ ತಪ್ಪಾಗದು.

ಈ ಕವಿಯು ಉಜ್ಜಯಿನಿಯವನು ಎಂಬ ಬಗ್ಗೆಯೂ ಸಹ ಒಂದು ವಾದವಿದೆ. ಕಾರಣ ಈತನು ವಿಕ್ರಮಾದಿತ್ಯನ ಆಶ್ರಯದಲ್ಲಿದ್ದ. ದ್ವಿತೀಯ ಚಂದ್ರಗುಪ್ತನು ಉಜ್ಜಯಿನಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಆತನ ಆಶ್ರಯದಲ್ಲಿ ಕಾಳಿದಾಸನಿದ್ದ ಎಂದು ಭಾವಿಸಿದಲ್ಲಿ ಆಗ ಮಾತ್ರ ಕಾಳಿದಾಸನು ಉಜ್ಜಯಿನಿಯ ನಿವಾಸಿ ಎಂದು ಹೇಳಲು ಬರುತ್ತದೆ. ಅಲ್ಲದೆ ಆತನು ಉಜ್ಜಯಿನಿಯ ವಿಚಾರದಲ್ಲಿ ಬಹು ಆತ್ಮೀಯ ಭಾವವನ್ನು ವ್ಯಕ್ತಪಡಿಸಿದ್ದಾನೆ. ರಾಮಗಿರಿಯಿಂದ ಅಲಕಾನಗರದ

ಮೇಘ ಮಾರ್ಗದ ಮಧ್ಯದಲ್ಲಿ ದೊರೆಯುವ ಗಿರಿ, ಪರ್ವತ, ನದಿ ಮೊದಲಾದವುಗಳ ವರ್ಣನೆಯನ್ನು ಮೇಘದೂತ ಕಾವ್ಯದಲ್ಲಿ ಯಕ್ಷನಿಗೆ ಬಹು ಚೆನ್ನಾಗಿ ತಿಳಿಸಿ ಹೇಳಿದ್ದಾನೆ. ಮೇಘಕ್ಕೆ ಉಜ್ಜಯಿನಿಯ ಮಾರ್ಗವಾಗಿಯೇ ಮುಂದುವರೆಯಲು ಸೂಚನೆಯನ್ನಿತ್ತಿದ್ದಾನೆ. "ವಕ್ರ ಪನ್ಥ ತದಪಿ" ಕಿಂಚಿತ್ತು ಮಾರ್ಗವನ್ನು ಬದಲಿಸಿದರೂ ಚಿಂತೆಯಿಲ್ಲ, ನೀನು ಉಜ್ಜಯಿನಿಯ ಮೇಲಿನಿಂದಲೇ ಮುಂದರಿಯಬೇಕು. "ಯಕ್ಷ" ಮಾತಾಡಲಾರ. ಆದರೂ ಹನ್ನೆರಡು ಶ್ಲೋಕಗಳಿಂದ ಆತನಿಗೆ ಮನದಟ್ಟಾಗುವಂತೆ ಉಜ್ಜಯಿನಿಯ ವರ್ಣನೆ ಮಾಡಿದ್ದಾನೆ. ಇದರಿಂದಾಗಿ ಕವಿಗೆ ಉಜ್ಜಯಿನಿಯ ಮೋಹವು ಎಷ್ಟಿತ್ತೆಂಬುದರ ಮನವರಿಕೆಯಾಗುತ್ತದೆ. ಯಕ್ಷನಿಗೆ ಒಂದು ವರುಷದ ಕಾಲ ತನ್ನ ಪತ್ನಿಯಿಂದ ದೂರಿರುವ ಪರಿಸ್ಥಿತಿಯಂತೂ ಕವಿಯ ಕಲ್ಪನಾ ವಿಲಾಸದ ಮಹೋನ್ನತ ಭಾವವನ್ನು ಸೂಚಿಸುತ್ತದೆ. ತನ್ನ ಕುಶಲತೆಯನ್ನು ಮುಟ್ಟಿಸುವ ಕಾತರ ಭಾವವಿದ್ದರೂ ಸಹ ಮನದ ವಿಹ್ವಲತೆಯ ನಿವಾರಣೆಗಾಗಿ ಉಜ್ಜಯಿನಿಯಲ್ಲಿ ತಂಗುವಂತೆ ಆಗ್ರಹಪಡಿಸುತ್ತಾನೆ. ಯಕ್ಷನ ಹೆಂಡತಿ ವಿರಹಾಗ್ನಿಯಿಂದ ಚಡಪಡಿಸುತ್ತಿದ್ದಾಳೆ. ಅಂಥ ಪರಿಸ್ಥಿತಿಯಲ್ಲಿಯೂ ಸಹ ನೀನು ಉಜ್ಜಯಿನಿಗೆ ಹೋಗು. ಅದು ಬಹು ಸುಂದರವಾದ ನಗರ. ಅಲ್ಲಿ ಮಹಾಕಾಲನ ದೇವಮಂದಿರವಿದೆ. ಆ ದೇವಾಲಯದ ಘಂಟಾನಾದವು ಬಹು ಮೋಹಕ. ಸಾಯಂಕಾಲದಲ್ಲಿ ವೇಶ್ಯೆಯರು ಹೇಗೆ ನರ್ತಿಸುತ್ತಾರೆಂಬುದನ್ನು ನೋಡು. ತನ್ನ ಪ್ರೇಯಸಿಗಿಂತ ಉಜ್ಜಯಿನಿಯನ್ನು ಕವಿ ಬಹು ಸೊಗಸಾಗಿ ವರ್ಣಿಸಿದ್ದಾನೆ. ಇದರಿಂದಾಗಿ ಆತನು ಉಜ್ಜಯಿನಿಯ ನಿವಾಸಿಯಾಗಿರುವ ಸಾಧ್ಯತೆಗಳಿವೆ ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಹೀಗೆ ಅನೇಕರು ಅನೇಕ ತರಹದಲ್ಲಿ ವಿಚಾರ ಮಾಡುವದು ಸಹಜ. ಈ ಎಲ್ಲ ವಿಚಾರಗಳನ್ನು ನಾವು ಬದಿಗಿರಿಸಿದಾಗಲೂ ಸಹ ಕಾಳಿದಾಸನು ಉಜ್ಜಯಿನಿಯವನಾಗಿರ ಬಹುದು ಎಂಬ ನಿರ್ಧಾರಕ್ಕೆ ಬರಬಹುದಾಗಿದೆ.

ಈಗಾಗಲೇ ಎರಡು ನಿರ್ಣಯಗಳನ್ನು ನಾವು ಸ್ವೀಕರಿಸಿದ್ದೇವೆ. ಕಾಳಿದಾಸನು ನಾಲ್ಕನೇ ಶತಮಾನದ ಕೊನೆ ಅಥವಾ ಐದನೇ ಶತಮಾನದ

ಪ್ರಾರಂಭದಲ್ಲಿ ಆಗಿಹೋದವನು. ಆತನು ಉಜ್ಜಯಿನಿಯವನು. ಶತಕರ್ತ ರಾಜಾ ವಿಕ್ರಮಾದಿತ್ಯನ ಮಗಳಾದ ಪ್ರಭಾವತಿ ಗುಪ್ತಾ ಇವಳನ್ನು ವಿದರ್ಭ ಪ್ರದೇಶದಲ್ಲಿಯ ವಾಕಟಾಕ ರಾಜವಂಶದೊಂದಿಗೆ ವಿವಾಹ ಮಾಡಿಕೊಡಲಾಗಿತ್ತು. ದ್ವಿತೀಯ ರುದ್ರಸೇನನೊಂದಿಗೆ ಚಂದ್ರಗುಪ್ತ ವಿಕ್ರಮಾದಿತ್ಯನು ವಿಜಯ ಸಾಧಿಸುತ್ತ ಮುಂದುವರೆದಿದ್ದನು. ಆದರೆ ಒಂದು ಸ್ಥಳದಲ್ಲಿ ಮಾತ್ರ ಆತನಿಗೆ ಅಡಚಣೆಯು ಕಾಣಿಸಿಕೊಂಡಿತು. ಆಗ ವಿದರ್ಭ ರಾಜ್ಯದಲ್ಲಿರುವ ವಾಕಟಕ ರಾಜನ ಸಹಾಯವನ್ನು ಆತನು ಪಡೆಯಬೇಕಾಯಿತು. ಈ ಘಟನೆಯಿಂದಾಗಿ ಪರಸ್ಪರರಲ್ಲಿಯ ಮಿತ್ರತ್ವವು ಚಿರಕಾಲ ಉಳಿದು ಬರಲು ತನ್ನ ಮಗಳನ್ನು ಎರಡನೇ ರುದ್ರಸೇನನಿಗೆ ಕೊಟ್ಟು ವಿವಾಹ ಮಾಡಿದನು. ಸಾಮಾನ್ಯವಾಗಿ ವಧು ಯಾವ ಮನೆಯನ್ನು ಸೇರುತ್ತಾಳೋ ಅದೇ ಮನೆಯ ಹೆಸರನ್ನು ಅವಳು ತನ್ನದಾಗಿ ಬೆಳೆಸಿಕೊಳ್ಳುವದು ಸಂಪ್ರದಾಯ. ಆದರೆ ಪ್ರಭಾವತಿಯು ಮಾತ್ರ ತನ್ನ ತವರು ಮನೆಯ ಹೆಸರನ್ನು ಮುಂದರಿಸಿಕೊಂಡು ಪ್ರಭಾವತಿ ಗುಪ್ತ ಎಂದೇ ತನ್ನ ಹೆಸರುಳಿಯುವಂತೆ ನೋಡಿಕೊಂಡಳು. ಇವಳ ಹೆಸರಿನಲ್ಲಿ ನಮಗೆ ಎರಡು ತಾಮ್ರಪಟಗಳು ನಂದಿವರ್ಧನಹಳ್ಳಿಯಲ್ಲಿ ಲಭ್ಯವಾಗಿರುವವು. ಈ ನಂದಿವರ್ಧನವು ರಾಮಗಿರಿ ಅಥವಾ ರಾಮಟೇಕದ ಸಮೀಪದಲ್ಲಿರುವ ನಗರಧನ ಎಂಬ ಇಂದಿನ ಹಳ್ಳಿಯಾಗಿರುವದು. ಇದು ಪ್ರಾಚೀನ ಕಾಲದಲ್ಲಿ ವಾಕಟಕ ರಾಜರ ರಾಜಧಾನಿಯಾಗಿತ್ತು. ವಾಕಟಕ ಮನೆತನದ ಇನ್ನೊಂದು ಶಾಖೆಯು ವತ್ಸಗುಲ್ಮ ಎಂಬ ಸ್ಥಳದಲ್ಲಿತ್ತು. ವತ್ಸಗುಲ್ಮ ಎಂಬುದೇ ಇಂದಿನ ವಾಶೀಮ. ಪ್ರಭಾವತಿಯ ಪತಿ ರುದ್ರಸೇನ ಗುಪ್ತ ಈತನಿಗೆ ದಿವಾಕರಸೇನ ಮತ್ತು ಕುಮಾರಸೇನ. ಆತನ ನಂತರ ಪ್ರವರಸೇನ ಎಂಬ ಹೆಸರಿನವನಿಗೆ ರಾಜ್ಯಾಧಿಕಾರವು ಲಭಿಸಿತು. ಈತನು ಪ್ರವರಪುರ ಎಂಬ ಹೆಸರಿನಲ್ಲಿ ಹೊಸ ರಾಜಧಾನಿಯನ್ನು ನಿರ್ಮಿಸಿದನು. ಇದು ಇಂದು ಧಾಮ ನದಿಯ ದಂಡೆಯ ಮೇಲಿರುವ ವಿನೋಬಾ ಭಾವನೆಯವರ ಆಶ್ರಮ ಪವನಾರವಾಗಿರುವದು. ಇದು ವಾಕಟಕ ರಾಜವಂಶದ ಮೂರನೇ ರಾಜಧಾನಿ ಎಂದೆನಿಸಿಕೊಂಡಿತ್ತು. ಆಶ್ರಮದ ಪರಿಸರದಲ್ಲಿ ನಡೆಸಲಾದ ಉತ್ಖನನದಲ್ಲಿ ದೊರೆತ ಅನೇಕ

ವಿಗ್ರಹಗಳನ್ನು ಹಾಗೂ ಪದಾರ್ಥಗಳನ್ನು ಇಂದಿಗೂ ಪವನಾರ ಆಶ್ರಮದಲ್ಲಿ ನಾವು ನೋಡಬಹುದು.

ಪ್ರಹಾರಸೇನನ ರಾಜಧಾನಿ ಪ್ರಹಾರಪುರ. ಈ ಸ್ಥಳದ ನಿವಾಸಿಗಳಿಗೆ ಚಂದ್ರಗುಪ್ತ ವಿಕ್ರಮಾದಿತ್ಯನು ರಾಜಕೀಯ ಶಿಕ್ಷಣವನ್ನೊದಗಿಸಲು ಕೆಲವು ಶಿಕ್ಷಕರನ್ನು ಕಳುಹಿಸಿದ್ದನು. ಪ್ರಹಾರಸೇನನೂ ಸಹ ಅದೇ ಶಿಕ್ಷಣದಂತೆ ನಡೆದುಕೊಳ್ಳುತ್ತಿದ್ದ. ಚಂದ್ರಗುಪ್ತ ವಿಕ್ರಮಾದಿತ್ಯನು ತನ್ನ ವಕೀಲನೊಬ್ಬನನ್ನು ಪ್ರಹಾರಸೇನನಲ್ಲಿರಿಸಿದ್ದ. ಆ ವಕೀಲನ ಹೆಸರು ಕಾಳಿದಾಸ. ಈತನು ಒಂದು ವರುಷದವರೆಗೆ ನಂದಿವರ್ಧನದಲ್ಲಿದ್ದ. ಈ ನಂದಿವರ್ಧನದಿಂದ ರಾಮಟೇಕ್ ಅಥವಾ ರಾಮಗಿರಿಯು ತೀರ ಸಮೀಪದ ಸ್ಥಳವಾಗಿದ್ದು ನಡೆದುಕೊಂಡು ಹೋಗಿ ಬರುವಷ್ಟು ಅಂತರದಲ್ಲಿರುವದು. ಒಂದು ವರುಷದವರೆಗೆ ಕಾಳಿದಾಸನಿಗೆ ತನ್ನ ಪತ್ನಿಯಿಂದ ದೂರಿರುವಂತಹ ಪ್ರಸಂಗವಿತ್ತು. ಆತನ ಮನದಲ್ಲಿ ನಡೆದ ವಿರಹ ವ್ಯಥೆಯನ್ನೇ ನಾವು ಮೇಘದೂತ ಕಾವ್ಯದಲ್ಲಿ ನೋಡುವಂತಾಗಿರುವದು. (ರಾಮಗಿರಿ ಪದಮುಲಾತ್ ಎಂಬ ಹೆಸರಿನಲ್ಲಿರುವ ತಾಮ್ರ ಪಟವು ಪ್ರಭಾವತಿ ಗುಪ್ತಾಳ ಹೆಸರಿನಲ್ಲಿದೆ). ಅಷಾಢ ಮಾಸದ ಮೊದಲು ದಿನಗಳಲ್ಲಿ ಮತ್ತು ಪತಂಗಗಳಂತೆ ಬೃಹತ್ತರ ಗಾತ್ರದಿಂದ ಕೂಡಿದ ಮೋಡಗಳು ರಾಮಗಿರಿಯ ಶಿಖರವನ್ನು ಮುತ್ತಿಕೊಂಡಿರುವುದನ್ನು ಕಂಡಾಗ ಕಾಳಿದಾಸನ ಯಕ್ಷನಿಗೆ ತನ್ನ ಪ್ರೀಯ ಪತ್ನಿಯ ಸ್ಮರಣೆ ಬರುವಂತಾಯಿತು. ಆಗ ಕವಿಯ ಹೃದಯಾಂತರಾಳದಿಂದ ಹೊರಹೊಮ್ಮಿದ ಶ್ಲೋಕಗಳೇ ಮೇಘದೂತ ಕಾವ್ಯರೂಪದಲ್ಲಿ ರಸಿಕರ ಕೈಗೆಟುಕವಂತಾಗಿರುವದು.

ಪ್ರಭಾವತಿ ಗುಪ್ತಾ ಇವಳ ವಿವಾಹ ಪ್ರಸಂಗದಲ್ಲಿ ಕಾಲಿದಾಸನ ಮಾಲವಿಕಾಗ್ನಿಮಿತ್ರ ಎಂಬ ನಾಟಕದ ಮೊದಲನೆಯ ಪ್ರಯೋಗವನ್ನು ಮಾಡಿರಬಹುದಾದ ಸಾಧ್ಯತೆ ಇದೆ. ಆ ಸಂದರ್ಭದಲ್ಲಿ ಉಜ್ಜಯಿನಿಯ ರಾಜಕುಮಾರಿ ವಿದರ್ಭದ ರಾಜಪುತ್ರ ಇವರು ಉಪಸ್ಥಿತರಿದ್ದಿರಬಹುದು. ಮಾಲವಿಕಾಗ್ನಿಮಿತ್ರ ನಾಟಕದಲ್ಲಿ ವಿದರ್ಭದ ರಾಜಕನ್ಯೆಯು ಇದ್ದಾಳೆ.

ವಿದಿಶಾದ ರಾಜಪುತ್ರನೂ ಇದ್ದಾನೆ. ಈ ಎರಡೂ ಪ್ರದೇಶಗಳ ವಂಶದವರು ವಿವಾಹ ಸಂದರ್ಭದಲ್ಲಿ ಒಂದಾಗಿರಬಹುದು. ಅನಂತರ ಕುಮಾರಸೇನನ ಜನ್ಮವಾದಾಗ ಕುಮಾರ ಸಂಭವ ಎಂಬ ಕಾವ್ಯ ರಚನೆಯಾಗಿರಬಹುದಾದ ಸಾಧ್ಯತೆಗಳಿವೆ. ಒಟ್ಟಿನಲ್ಲಿ ಒಂದು ವರುಷದ ಕಾಲ ಕಾಳಿದಾಸನು ವಿದರ್ಭದಲ್ಲಿ ವಾಸವಾಗಿದ್ದ. ಇದರಿಂದಾಗಿ ಈ ಮಹಾಕವಿಯು ವಿದರ್ಭ ಪ್ರಾಂತದವನೆಂಬ ಮೋಹ ಅಲ್ಲಿಯ ಪ್ರಜೆಗಳಿಗುಂಟಾಗುವದು ಸಹಜ. ಈ ಆತ್ಮೀಯ ಭಾವಕ್ಕೆ ಎಂಥವರೂ ಮನ್ನಿಸಬೇಕಾಗುವದು.

ಕಾಳಿದಾಸನ ಕಾಲ ಯಾವುದು ಎಂಬುದು ನಿಖರವಾಗಿ ನಿರ್ಧಾರವಾದಲ್ಲಿ ಅನಂತರ ಇತಿಹಾಸದ ಕಾಲವನ್ನು ನಿರ್ಧರಿಸಲು ಅವಕಾಶವಾಗುವದು. ಈ ಕವಿಯ ವಿಚಾರದಲ್ಲಿ ಎರಡು ಗ್ರಂಥಗಳು ಉಪಲಬ್ಧ. ಅದರಲ್ಲಿ ಮೊದಲನೆಯದು ಬಲ್ಲಾಳ ಕವಿಯ ಭೋಜ ಪ್ರಬಂಧ. ಇನ್ನು ಎರಡನೆಯದು ಟಿಬೇಟಿನ ಭಿಕ್ಷು ತಾರಾನಾಥನಿಂದ ರಚಿತವಾದ ದಂತಕಥೆಗಳ ಗ್ರಂಥ. ಈ ದಂತ ಕಥೆಯನ್ನಾಧರಿಸಿ ಕಾಳಿದಾಸನ ಭಕ್ತರು ಅನೇಕ ರೀತಿಯಲ್ಲಿ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿರುವದುಂಟು.

ಕಾಳಿದಾಸನು ಬ್ರಾಹ್ಮಣಪುತ್ರ. ಅನಾಥನಾದ ಆತನನ್ನು ಓರ್ವ ದನಗಾಹಿಯು ತೆಗೆದುಕೊಂಡು ಹೋಗಿ ಆತನ ಪಾಲನೆ ಮಾಡಿದ. ಬಾಲಕನು ನೋಡಲು ಬಹು ಸುಂದರನಾಗಿದ್ದ. ಬಹು ಬುದ್ಧಿವಂತನಾಗಿದ್ದ. ಚುರುಕು ಸ್ವಭಾವದವನಾಗಿದ್ದ. ಮುಖದಲ್ಲಿ ವಿಚಿತ್ರವಾದ ಶಾಂತ ಕಳೆಯು ಎದ್ದು ಕಾಣುತ್ತಿತ್ತು. ಆತನ ದೇಹ ಸೌಷ್ಠವು ಎಂಥವರನ್ನೂ ಆಕರ್ಷಿಸುವಂತಿತ್ತು. ಆತನು ವಾಸಿಸುತ್ತಿದ್ದ ರಾಜ್ಯದ ರಾಜಕುಮಾರಿಯ ಸ್ವಯಂವರವು ಏರ್ಪಡಿಸಲಾಗಿತ್ತು. ಅವಳು ತಾನೊಬ್ಬ ದೊಡ್ಡ ವಿದ್ವಾಂಸಳೆಂಬ ಅಹಂಕಾರದವಳಾಗಿದ್ದಳು. ತಾನು ಮಾಡುವ ಪರೀಕ್ಷೆಯಲ್ಲಿ ಯಾರು ತೇರ್ಗಡೆ ಹೊಂದುವರೋ ಅಂಥವರನ್ನೇ ವಿವಾಹವಾಗುವುದಾಗಿ ಪ್ರತಿಜ್ಞೆ ಮಾಡಿದ್ದಳು. ಆಕೆಯ ಹಟಮಾರಿತನವು ಎಲ್ಲರಿಗೂ ಬೇಸರ ಬರುವಂತೆ ಮಾಡಿತ್ತು. ಹೇಗಾದರೂ ಮಾಡಿ ಅವಳ ಗರ್ವಹರಣವಾಗಬೇಕು. ಅಲ್ಲದೆ

ಅವಳು ವಿವಾಹಿತಳಾಗಬೇಕು ಎಂಬ ಯೋಚನೆಯಿಂದ ರಾಜ್ಯದ ಮಂತ್ರಿಪ್ರಧಾನರು ತಮ್ಮದೇ ಆದ ಯೋಜನೆಯೊಂದನ್ನು ರಚಿಸಿದರು. ಅದೇ ಸಮಯದಲ್ಲಿ ತಾರುಣ್ಯದಿಂದ ತುಂಬಿದ ಕಾಳಿದಾಸನು ಅವರ ಗಮನಕ್ಕೆ ಬರುವಂತಾದ. ಆತನನ್ನು ಕರೆತಂದು ಕೆಲವು ದಿನ ಅವನಿಗೆ ರಾಜಗಾಂಭೀರ್ಯದ ಶಿಕ್ಷಣವನ್ನು ಕೊಟ್ಟು ಆತನೊಂದಿಗೆ ದಿಗಂತ ಪಂಡಿತರ ಒಂದು ಗುಂಪನ್ನು ನಿರ್ಮಾಣ ಮಾಡಿ, ಆ ಪಂಡಿತರೆಲ್ಲರೂ ಆ ತರುಣನ ಶಿಷ್ಯರೆಂಬಂತೆ ಅವರ ಮನವನ್ನು ಸಿದ್ಧಪಡಿಸಿ, ಅವರೆಲ್ಲರೊಂದಿಗೆ ಅಂತಃಪುರಕ್ಕೆ ಕಳಿಸಿ ಪಂಡಿತರ ಆಗಮನದ ವಿಷಯವನ್ನರುಹಿ ಮೊದಲು ಆ ತರುಣನ ಶಿಷ್ಯವರ್ಗದವರನ್ನು ಪರೀಕ್ಷಿಸಿದ ನಂತರವೇ ತರುಣನು ವಾಗ್ವಿವಾದಕ್ಕಿಳಿಯುವನೆಂಬುದಾಗಿ ತಿಳಿಸಲಾಯಿತು. ರಾಜಕನ್ಯೆ ಶಿಷ್ಯರೆನಿಸಿದ ಪಂಡಿತರ ಪರೀಕ್ಷೆ ಯನ್ನಾರಂಭಿಸಿದಳು. ಮಹಾ ವಿದ್ವಾಂಸರಾದ ಶಿಷ್ಯರ ಪಾಂಡಿತ್ಯವೇ ಹೀಗಿರಬೇಕಾದಲ್ಲಿ ಇವರೆಲ್ಲರಿಗೂ ಗುರುವೆನಿಸುತ್ತಿದ್ದ ಆ ತರುಣನಲ್ಲಿ ಅದೆಂಥ ಪಾಂಡಿತ್ಯವಿರಬಹುದು ಎಂದು ಯೋಚಿಸತೊಡಗಿದಾಗ ವಿಧಿವಿಲಾಸವೆಂಬಂತೆ ಆತನ ವಿಷಯದಲ್ಲಿ ಅನುರಾಗವು ಮೂಡಿತು. ಅವಳು ಆ ತರುಣನೊಂದಿಗೆ ವಿವಾಹ ಮಾಡಿಕೊಳ್ಳಲು ಒಪ್ಪಿದಳು. ವಿವಾಹದ ನಂತರ ಮಾರನೆಯ ದಿನವೇ ಆ ತರುಣನ ಗುಟ್ಟು ಹೊರಬಿದ್ದಿತು. ಕೋಪದಿಂದ ಆಕೆ ಅನೇಕ ರೀತಿಯಲ್ಲಿ ಆ ತರುಣನ ಮುಖಭಂಗ ಮಾಡಿ ಅರಮನೆಯಿಂದ ಆತನನ್ನು ಹೊರದೂಡಿದಳು. ಆಗ ಆತನು ನಾನು ಅಪರಾಧಿಯಲ್ಲ. ಇದೆಲ್ಲ ನಿಮ್ಮ ಪ್ರಧಾನಿಯ ನಾಟಕ ಎಂದು ಹೇಳಿದಾಗಲೂ ಸಹ ಅವಳು ಆತನ ಮಾತಿಗೆ ಗಮನವನ್ನೀಯದೆ ದೂರದಿಂದ ಹೊರಹಾಕಿಸಿದಳು.

ಜೀವನದಲ್ಲಿ ಮೊಟ್ಟ ಮೊದಲು ಬಾರಿ ಆ ತರುಣನು ಇಂಥ ಅವಮಾನದ ಹೊರೆ ಹೊತ್ತು ಬೀದಿಗಿಳಿಯಬೇಕಾಯಿತು. ನೊಂದ ಮನದಿಂದ ಕಾಡಿನಲ್ಲಿ ಅಲೆಯುತ್ತಿರುವಾಗ ಕಾಳೀಮಾತೆಯ ಮಂದಿರವನ್ನು ಕಂಡನು. ಅನನ್ಯವಾಗಿ ಆ ದೇವಿಯಲ್ಲಿ ಪ್ರಾರ್ಥನೆ ಮಾಡತೊಡಗಿದನು.

ಕಠೋರವಾದ ತಪಸ್ಸಿನಿಂದ ಅವಳನ್ನು ಪ್ರಸನ್ನೀಕರಿಸಲು ಪ್ರಯತ್ನಿಸತೊಡಗಿದನು. ಕೊನೆಗೊಮ್ಮೆ ನಿರಾಶನಾಗಿ ತನ್ನ ತಲೆಯನ್ನು ಕಡಿದು ದೇವಿಯ ಪದತಲದಲ್ಲಿ ಸಮರ್ಪಿಸುವ ಸನ್ನಾಹವನ್ನು ನಡೆಸಿದನು. ಆಗ ಜಗನ್ಮಾತೆಯಾದ ಕಾಳಿಕಾದೇವಿಯು ಪ್ರಸನ್ನಳಾಗಿ ಆತನ ಶಿರದಲ್ಲಿ ಅಭಯ ಹಸ್ತವನ್ನಿರಿಸಿದಳು. ತಾಯಿಯ ಹಸ್ತಸ್ಪರ್ಶದಿಂದ ಆತನಿಗೆ ಸಕಲ ಶಾಸ್ತ್ರಗಳು ಕರತಲಾಮಲಕವಾದಂತೆ ಭಾಸವಾಯಿತು. ಮುಂದೆ ಆತನು ಆ ಕಾಳೀಮಾತೆಯ ದಾಸನೆಂದು ಪ್ರಸಿದ್ಧಿ ಹೊಂದಿದನೆಂಬುದು ಒಂದು ಐತಿಹ್ಯ ಸಂಗತಿಯೆನಿಸಿರುವುದು.

ಭಗವತಿಯ ಅನುಗ್ರಹದಿಂದ ಸಕಲ ವಿದ್ಯಾ ಪಾರಂಗತನಾದ ಕಾಳಿದಾಸನು ಪುನಃ ತನ್ನ ಪತ್ನಿಯನ್ನು ಕಾಣಲು ಅರಮನೆಗೆ ಬರುತ್ತಾನೆ. ಆತನನ್ನು ಕಂಡು ಸಿಡಿಮಿಡಿಗೊಂಡ. ರಾಜಕನ್ಯೆಯು ಇಲ್ಲಿಗೇಕೆ ಬಂದಿರುವಿ? ಏನಾದರೂ ವಿದ್ಯೆಯನ್ನು ಸಂಪಾದಿಸಿರುವೆಯೋ ಹೇಗೆ? ಎಂದು ಗುಡುಗಿದಳು. "ಅಸ್ತಿ ಕಶ್ಚಿತ್ ವಾಗ್ವಿಶೇಷಃ" ಅಲ್ಪ ಸ್ವಲ್ಪ ಮಟ್ಟಿಗಾದರೂ ನಿನ್ನ ವಾಣಿಯಲ್ಲಿ ಸಂಸ್ಕಾರವಾಗಿದೆಯೇ? ಎಂದು ಕೇಳಿದಾಗ ಆ ಶಬ್ದಗಳಿಗೆಲ್ಲ ನಾನಾ ವಿಧವಾದ ಅರ್ಥವನ್ನು ವಿವರಿಸತೊಡಗಿದನು. "ಅಸ್ತಿ ಕಶ್ಚಿತ್ ವಾಗ್ವಿಶೇಷಃ" ಎಂಬ ಸಾಲಿನಲ್ಲಿ ದೊರೆಯುವ ಅಸ್ತಿ ಎಂಬ ಪದವನ್ನು ಬಳಸಿಕೊಂಡು "ಅಸ್ತ್ಯುತ್ತರಸ್ಯಾಂ ದಿಶಿದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ" ಎಂಬುದಾಗಿ ಕುಮಾರಸಂಭವ ಮಹಾಕಾವ್ಯವು ನಿರರ್ಗಳವಾಗಿ ಹೊರಹೊಮ್ಮಿ ಬರುವಂತಾಯಿತು. ಇನ್ನು ಮುಂದಿನ ಶಬ್ದ ಕಶ್ಚಿತ್ ಎಂಬುದು ಆ ಪದವನ್ನೆತ್ತಿಕೊಂಡು "ಕಶ್ಚಿತ್ ಕಾಂತಾ ವಿರಹಗುರುಣಾ ಸ್ವಾಧಿಕಾರತ್" ಎಂಬ ಶ್ಲೋಕದಿಂದ ಮೇಘದೂತ ಕಾವ್ಯವು ಹೊರಹೊಮ್ಮಿ ಬಂದಿತು. ಇದರ ಮುಂದಿನ ವಾಕ್ಯ "ವಾಗ್" ಈ ಶಬ್ದವೇ "ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ। ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ॥" ಲೀಲಾಜಾಲವಾಗಿ ರಘುವಂಶ ಮಹಾಕಾವ್ಯವು ರೂಪಗೊಂಡಿತು.

ಆತನ ಬುದ್ಧಿ ಚಾತುರ್ಯ, ಪಾತ್ರಗಳ ಸೃಷ್ಟಿ, ನಿಸರ್ಗದೊಂದಿಗೆ ಹೊಂದಿಕೊಂಡ ಆತನ ಏಕಾತ್ಮತೆ ಒಂದು ಇನ್ನೊಂದಕ್ಕೆ ಪೂರಕವೆಂಬಂತೆ ಪರಸ್ಪರವಾಗಿ ಅವಿನಾಭಾವ ಸಂಬಂಧವನ್ನು ಹೊಂದಿಕೊಂಡಂತೆ ತೋರತೊಡಗಿತು. ಯಾರನ್ನು ತಾನು ಅಪಮಾನಿತನನ್ನಾಗಿ ಮಾಡಿ ಹೊರಹಾಕಿದ್ದಳೋ ಇಂದು ಆತನಲ್ಲಿ ಹುದುಗಿದ ಪ್ರಕಾಂಡ ಪಾಂಡಿತ್ಯದ ನಿಧಿಯುನ್ನು ಕಂಡು ಅನುಭವಿಸಿ, ಆಶ್ಚರ್ಯಚಕಿತಳಾಗಿ ಆತನನ್ನು ನೋಡತೊಡಗಿದಳು. ತನ್ನಿಂದಾದ ಅಪರಾಧಕ್ಕಾಗಿ ಕ್ಷಮೆ ಯಾಚಿಸಿದಳು. ಆಗ 'ನೀನು ಹಾಗೆ ಮಾಡದೇ ಹೋದಲ್ಲಿ ಇಂದು ನನಗೆ ಆ ಮಹಾತಾಯಿಯ ಅನುಗ್ರಹವಾಗುತ್ತಿರಲಿಲ್ಲ. ಆದುದರಿಂದ ನನಗೆ ನೀನು ಗುರು ಸ್ಥಾನದಲ್ಲಿರುವೆ. ನೀನು ಆ ಮಾತ್ರ ಸ್ಥಾನದಲ್ಲಿರುವೆ ಎಂದು ಹೇಳಿದಾಗ ರಾಜಕನ್ಯೆಗೆ ಆ ಮಾತು ಸರಿಬರಲಿಲ್ಲ. ಪುನಃ ಅವಳಲ್ಲಿ ಅಹಂಕಾರವು ಹೆಡೆಯೆತ್ತಿತು. ಒಂದು ಹೆಣ್ಣಿನಿಂದಲೇ ನಿನ್ನ ಮರಣವು ಲಭಿಸಲಿ' ಎಂದು ಶಾಪವನ್ನಿತ್ತಳು.

ರಾಜಗೃಹದಿಂದ ಹೊರ ಹೊರಟ ಕಾಳಿದಾಸನು ದೇಶ ಸಂಚಾರಿಯಾಗಿ ಪಯಣ ಬೆಳೆಸುತ್ತ ದಕ್ಷಿಣದಲ್ಲಿರುವ ಲಂಕಾದ್ವೀಪಕ್ಕೆ ಬಂದು ಓರ್ವ ವಾರಾಂಗನೆಯ ಆಶ್ರಯವನ್ನು ಪಡೆದುಕೊಂಡನು. ಆತನಿಗೆ ಸಿಂಹಳ ದ್ವೀಪದಲ್ಲಿರುವ ತನ್ನ ಮಿತ್ರನನ್ನು ಭೇಟಿಯಾಗುವ ಹಂಬಲವಿತ್ತು. ಆತನ ಹೆಸರು ಕುಮಾರದಾಸನೆಂದಿದ್ದು, ಆತನು "ಜಾನಕೀ ಹರಣ" ಎಂಬ ನಾಟಕವನ್ನು ರಚಿಸಿರುವನೆಂಬ ಮಾತು ಕಾಳಿದಾಸನ ಗಮನಕ್ಕೆ ಬರುವಂತಾಗಿತ್ತು. ಕಾಲಾಂತರದಲ್ಲಿ ಕುಮಾರದಾಸನಿಗೆ ತನ್ನ ಮಿತ್ರನು ತನ್ನನ್ನು ಹುಡಿಕೊಂಡು ಬಂದಿರುವುದಾಗಿ ತಿಳಿದು ಬಂದಿತು. ಆತನನ್ನು ಹುಡುಕುವ ಪರಯತ್ನವನ್ನಾರಂಭಿಸಿದನು. ಕೊನೆಗೊಮ್ಮೆ ತನ್ನ ದರ್ಬಾರಿನಲ್ಲಿ "ಕಮಲೇ ಕಮಲೋತ್ಪತ್ತಿ: ಶ್ರೂಯತೇ ನತು ದೃಶ್ಯತೇ" ಎಂಬ ಶ್ಲೋಕವನ್ನು ಬಹಿರಂಗವಾಗಿ ಪ್ರಕಟಿಸಿ ಇದಕ್ಕೆ ಸರಿಯಾದ ಉತ್ತರವನ್ನಿತ್ತಲ್ಲಿ ಬಹುಮಾನವನ್ನೀಯುವುದಾಗಿ ತಿಳಿಸಿದನು. ದರ್ಬಾರಿನ

ಕಲಾವಿದೆಯಾದ ನರ್ತಕಿ ಅಂದಿನ ದಿನ ದರ್ಬಾರಿನಲ್ಲಿ ಘೋಷಿಸಲ್ಪಟ್ಟ ವಿವರವನ್ನು ತನ್ನ ಮನೆಯಲ್ಲಿ ಬಿಡಾರ ಮಾಡಿದ್ದ ಕಾಳಿದಾಸನ ಮುಂದೆ ಮಂಡಿಸಿದಳು. ಆಗ ಕವಿಯು ಆ ನೃತ್ಯಾಂಗನೆಯ ಮುಖಾರವಿಂದವನ್ನು ತದೇ ಕಚಿತ್ತದಿಂದ ವೀಕ್ಷಿಸತೊಡಗಿದನು. 'ಯಾಕೆ ಹೀಗೆ ನೋಡುತ್ತಿದ್ದೀರಿ' ಎಂದು ಆಕೆ ಪ್ರಶ್ನೆ ಮಾಡಿದಾಗ ಕಾಳಿದಾಸನು ಹೇಳಿದ. ''ಬಾಲೇ ತವ ಮುಖಾಂಬೋಜೇ ಕಥಂ ಇಂದೀವರ ದ್ವಯಮ್'' ನಿನ್ನ ಮುಖಕಮಲದಲ್ಲಿ ಕಮಲದಂತಿರುವ ಎರಡು ನೇತ್ರಗಳು ಹೇಗೆ ಅರಳಿದವು ಎಂದು ಕೇಳಿದ. ಮರುದಿನ ಅದನ್ನು ತಾನೇ ರಚಿಸಿರುವುದಾಗಿ ದರ್ಬಾರಿನಲ್ಲಿ ಬಾಲೇ ತವ ಮುಖಾಂಬೋಜೇ ಕಥಂ ಇಂದೀವರ ದ್ವಯಂ, ನರ್ತಕಿಯು ಸಮಸ್ಯೆಗೆ ಸಮಾಧಾನವನ್ನು ಮಂಡಿಸಿದಳು. ಆಗ ಕುಮಾರದಾಸನಿಗೆ ಸ್ಪಷ್ಟವಾಗಿ ಇದು ತನ್ನ ಸ್ನೇಹಿತನಿಂದ ಬಂದ ಉತ್ತರವೆಂದೆನಿಸಿತು. ಬಹು ಆಗ್ರಹಪಡಿಸಿದ ನಂತರ ಅವಳು ತನ್ನ ಅಪರಾಧವನ್ನೊಪ್ಪಿಕೊಂಡಳು. ತಾನು ರಾಜಗೃಹಕ್ಕೆ ಬರುವ ಮೊದಲೇ ಕಲಿದಾಸನಿಗೆ ವಿಷಹಾಕಿದ್ದಳು. ತನ್ನ ಮಿತ್ರನಿಗೆ ವಿಷ ಹಾಕಿ ಕೊಂದಳೆಂಬ ಸಮಾಚಾರದಿಂದ ವಿಹ್ವಲನಾದ ಆತನು ಕಾಳಿದಾಸನ ಚಿತೆಯ ಮೇಲೆರಗಿ ಪ್ರಾಣತ್ಯಾಗ ಮಾಡಿದನು. ಮಾಟರ್ ಎಂಬಲ್ಲಿ ಕಿರಿಂದಿನದಿಯ ದಡದಲ್ಲಿ ಮಹಾಕವಿ ಕಾಳಿದಾಸನ ಅಂತ್ಯವಾಯಿತೆಂದು ಆ ಸ್ಥಳವನ್ನು ಇಂದಿಗೂ ತೋರಿಸುವದುಂಟು. ಲಂಕಾ ಪ್ರಜೆಗಳಿಗೂ ಸಹ ಮಿತ್ರಪ್ರೇಮಿಯಾದ ಕಾಳಿದಾಸನು ತನ್ನ ಕೊನೆಯುಸಿರನ್ನು ಲಂಕಾದಲ್ಲಿ ಬಿಟ್ಟನು ಎಂದು ಸಮಾಧಾನದ ಮಾತನ್ನಾಡುವರು.

ಭೋಜಪ್ರಬಂಧ ಅಥವಾ ತಾರಾನಾಥರ ಗ್ರಂಥಗಳಲ್ಲಿ ಕಾಣಸಿಗುವ ಘಟನೆಗಳೆಲ್ಲ ಬೀರಬಲ್ಲ ಅಕಬರನ ಕಥೆಗಳಂತಿವೆ. ಆತನ ವಿಚಾರದಲ್ಲಿ ರೂಢಿಯಲ್ಲಿರುವ ಇಂಥ ದಂತಕಥೆಗಳನ್ನೋದಿದಾಗ ಎಂಥವನಿಗೂ ನಗು ಬರುತ್ತದೆ. ಈ ಅಂತೆಗಳನ್ನು ಬದಿಗಿರಿಸಿ ಕಾಳಿದಾಸನಿಂದ ರಚಿತವಾಗಿರುವ ಕೃತಿಗಳನ್ನು ಕುರಿತು ಅಭ್ಯಾಸ ಮಾಡುವುದು ವಿಹಿತವೆನಿಸುತ್ತದೆ. ಈ ಮಹಾನುಭಾವನಿಂದ ಎರಡು ಖಂಡ ಕಾವ್ಯಗಳು, ಎರಡು ಮಹಾ ಕಾವ್ಯಗಳು

ಹಾಗೂ ಮೂರು ನಾಟಕಗಳನ್ನು ನಾವು ಪಡೆದಿದ್ದೇವೆ. ಆತನ ಕೃತಿಗಳಿಂದ ನಮಗೆ ದೊರೆಯುವ ವಿಚಾರಗಳು. ಬಹು ವಿಶ್ವಸನೀಯವಾಗಿವೆ. ಆತನು ಲೇಖನ ವಿಚಾರದಲ್ಲಿ ಸವ್ಯಸಾಚಿಯಾಗಿದ್ದ ಕೃತಿನಿರ್ಮಾಣದಲ್ಲಿ ಸವ್ಯಸಾಚಿ ಎಂದೆನಿಸಿಕೊಂಡ. ಜ್ಞಾನಭಂಡಾರದಲ್ಲಿಯೂ ಸಹ ಆತನು ಮಹಾಸವ್ಯಸಾಚಿ ಎಂದೆನಿಸಿಕೊಂಡ. ಆತನಿಗೆ ತಿಳಿಯದಿದ್ದ ಶಾಸ್ತ್ರಗಳೇ ಇರಲಿಲ್ಲ. ಆತನಿಗೆ ಸರಿದೂಗುವಂತಹ ವಿದ್ಯಾವಾಚಸ್ಪತಿಗಳಾರೂ ಇರಲಿಲ್ಲ. ಆದುದರಿಂದಲೇ ಜ್ಞಾನಿಗಳು "ಉಪಮಾ ಕಾಳಿದಾಸಸ್ಯ" ಎಂದು ಬಹು ಗಂಭೀರ ಭಾವದಿಂದ ಆತನಿಗೆ ಆದ್ಯ ಮರ್ಯಾದೆಯನ್ನಿತ್ತರು. ಆತನ ಕೃತಿಗಳಲ್ಲಿ ಜ್ಯೋತಿಷ್ಯ ಶಾಸ್ತ್ರವಿದೆ. ವೈದ್ಯ ಶಾಸ್ತ್ರವಿದೆ. ವೇದ ಭಾಗಗಳಿವೆ. ಆತನಿಗೆ ಚಿತ್ರಕಲೆಯಲ್ಲಿ ಪರಿಣತೆ ಇದೆ. ಗಾಯನ ಕಲೆಯಲ್ಲಿ ಆತ ಪರಿಪೂರ್ಣನೆನಿಸಿದ್ದಾನೆ. ಸಮಕಾಲೀನ ಜೀವನದ ರಸಿಕತೆಯಲ್ಲಿಯೂ ಆತನು ಪರಿಪೂರ್ಣನೆಂದೆನಿಸಿಕೊಂಡಿದ್ದಾನೆ. ಕಾಳಿದಾಸನ ಯಕ್ಷ ಚಿತ್ರಕಾರನಾಗಿದ್ದರೆ, ದುಷ್ಯಂತನು ಚರಿತ್ರಕಾರನಾಗಿದ್ದ. ಆತನ ನಾಯಿಕೆ ಯಕ್ಷಪತ್ನಿ ವೀಣಾ ವಾದಕಳಾಗಿದ್ದಳು. ಅವಳು ಗಾಯನ ಶಾಸ್ತ್ರದಲ್ಲಿ ಅಪ್ರತಿಭಳಾಗಿದ್ದಳು. ಕಾಳಿದಾಸನ ಜ್ಞಾನದ ಆಳವನ್ನು ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ಸ್ವತಃ ಆತನು ಅಲಂಕಾರೋಪಾಸಕನಾಗಿದ್ದ. ಆತನ ಗ್ರಂಥಗಳ ವ್ಯಾಸಂಗವು ಕ್ಷಣಕ್ಷಣಕ್ಕೂ ವಾಚಕರ ಮನದಲ್ಲಿ ಕುತೂಹಲವನ್ನು ಕೆರಳಿಸುವಂತಹವು. ಆತನೊಬ್ಬ ಅಮರಕವಿ, ವರಕವಿ, ರಾಷ್ಟ್ರಕವಿ ಎಂಬ ಪದವು ಆತನ ಕೃತಿಗಳಿಗೆ ಅನ್ವರ್ಥಕವಾದ ಪದವೆನಿಸುವದು. ಇಂಥ ಕಾವ್ಯಪ್ರೇಮಿ ನಾಟಕಕಾರನನ್ನು ಪಡೆದ ಭಾರತದ ಪ್ರಾಜ್ಞರು ಸೃಷ್ಟಿಕರ್ತನನ್ನು ಮನಸಾವಂದಿಸುವದು ಉಚಿತವೆಂದೆನಿಸುವುದು.

# ಉಜ್ಜೈನ

ದ್ವಾಪರಯುಗದಲ್ಲಿ ಶ್ರೀ ಕೃಷ್ಣ ಬಲರಾಮರು ಸುದಾಮನೊಂದಿಗೆ ಗುರುಕುಲದಲ್ಲಿದ್ದ ಆಶ್ರಮವು ಉಜ್ಜೈನದಲ್ಲಿ ಹರಿವ ಸಿಪ್ರಾ ನದಿಯ ಆಚೆಯ ದಡದಲ್ಲಿರುವ ಗೋಪಾಲಪುರದಿಂದ ಎರಡು ಮೈಲಿನ ಅಂತರದಲ್ಲಿ ಸಾಂದಿಪನಿ ಆಶ್ರಮವು ಇಂದಿಗೂ ಇದೆ. ಆಶ್ರಮದಲ್ಲಿ ಗೋಮತಿ ಎಂಬ ಹೆಸರಿನ ಸರೋವರವಿದೆ. ಅಲ್ಲದೆ ಗುರು ಸಾಂದಿಪನಿ ಹಾಗೂ ಶ್ರೀ ಕೃಷ್ಣ, ಬಲರಾಮ, ಸುದಾಮರ ಪ್ರತಿಮೆಗಳಿಂದ ಕೂಡಿದ ಮಂಟಪವಿದೆ. ಈ ಆಶ್ರಮವು ವಲ್ಲಭ ಸಂಪ್ರದಾಯಕ್ಕೆ ಸೇರಿದ ಮಠವಾಗಿದೆ. ಪರಿಸರದಲ್ಲಿ ವಿಷ್ಣುಸಾಗರ, ಪುರುಷೋತ್ತಮ ಸಾಗರಗಳೆಂಬ ಬೇರೆರಡು ಸರೋವರಗಳಿವೆ. ಬಹು ರಮಣೀಯವಾದ ಸ್ಥಳವಾಗಿದ್ದು, ಶ್ರೀ ಕೃಷ್ಣನ ಬಾಲ್ಯ ಜೀವನದ ನೆನಪನ್ನುಂಟು ಮಾಡುತ್ತದೆ.

ಉಜ್ಜೈನಿ ಹಾಗೂ ಅಲ್ಲಿ ಹರಿವ ಸಿಪ್ರಾ ನದಿಯನ್ನು ಕುರಿತು ಮಹಾಕವಿಯಾದ ಕಾಳಿದಾಸನು ಮೇಘದೂತ ಕಾವ್ಯದಲ್ಲಿ ವಿರಹಿಯಾದ ತನ್ನ ಪತ್ನಿಗೆ ಸಂದೇಶವನ್ನು ತಲುಪಿಸಲು ಬಹು ಮೃದುವಾದ ಮಾತುಗಳಿಂದ ಈ ಕ್ಷೇತ್ರದ ಮಹಾತ್ಮ್ಯವನ್ನೆಲ್ಲ ಮೇಘರಾಜನಿಗೆ ತಿಳಿಸಿಕೊಡುತ್ತಾನೆ. ಆತನ ವರ್ಣನೆಯ ಸಾಕ್ಷಾತ್ಕಾರಕ್ಕಾಗಿಯಾದರೂ ನಾವು ಉಜ್ಜೈನಿ ಕ್ಷೇತ್ರಕ್ಕೆ ಭೇಟಿ ಕೊಡುವುದುಚಿತವೆನಿಸುತ್ತದೆ.

*ಆಕಾಶೇ ತಾರಕಂ ಲಿಂಗಂ ಪಾತಾಳೇ ಹಾಟಕೇಶ್ವರಂ।*
*ಮೃತ್ಯುಲೋಕೇ ಮಹಾಕಾಲಂ ಲಿಂಗತ್ರಯ ನಮೋಸ್ತುತೇ ॥*

ಈ ಕ್ಷೇತ್ರಕ್ಕೆ ಹೋಗಲು ಮಧ್ಯ ರೈಲ್ವೆ ವಿಭಾಗದಲ್ಲಿ ಭೂಪಾಲ-

ಉಜ್ಜೈನ ಮಾರ್ಗ, ಆಗ್ರಾ-ಉಜ್ಜೈನ ಮಾರ್ಗ ಮತ್ತು ಪಶ್ಚಿಮ ರೈಲ್ವೆ ವಿಭಾಗದಿಂದ ನಗದಾ-ಉಜ್ಜೈನ ಹಾಗೂ ಫತೇದಾಬಾದ-ಉಜ್ಜೈನ ಈ ಮಾರ್ಗಗಳಿಂದ ಹೋಗಬಹುದು. ಈ ಕ್ಷೇತ್ರದಲ್ಲಿ ಅಸಂಖ್ಯಾತ ಧರ್ಮಶಾಲೆಗಳಿವೆ. ಕೆಲವು ಭಕ್ತರಂತೂ ಪಂಡಾಗಳ ಮನೆಯಲ್ಲಿಯೇ ಬಿಡಾರ ಮಾಡುತ್ತಾರೆ. ರೈಲು ನಿಲ್ದಾಣದಿಂದ ಗ್ವಾಲಿಯರ ಮಹಾರಾಜರಿಂದ ನಿರ್ಮಿತವಾದ ಧರ್ಮಛತ್ರವು ಬಹು ಸಮೀಪದಲ್ಲಿದೆ. ಫತೇಪುರ ಮಹಾರಾಜರ ಛತ್ರವಿದೆ. ಅಲ್ಲದೆ ಖೇಮರಾಜ ಕೃಷ್ಣದಾಸರ ಛತ್ರವಿದೆ. ಇವು ಪ್ರವಾಸಿಗರಿಗೆ ಎಲ್ಲ ರೀತಿಯ ಸೌಕರ್ಯಗಳಿಂದ ಕೂಡಿದವುಗಳಾಗಿವೆ.

ಶಿವಭಕ್ತರು ಸಾಮಾನ್ಯವಾಗಿ ಪಂಚಕ್ರೋಶ ಯಾತ್ರೆ ಎಂಬ ಹೆಸರಿನಿಂದ ಈ ಕ್ಷೇತ್ರಕ್ಕೆ ಪ್ರದಕ್ಷಿಣ ರೂಪದಲ್ಲಿ ಸಂಚರಿಸಿ ಬರುತ್ತಾರೆ. ದಾರಿಯುದ್ದಕ್ಕೂ ಗೋಪಾಲ ಮಂದಿರ, ಗಢ ಕಾಲಿಕಾ, ಭರ್ತೃಹರಿಗುಹಾ, ಕಾಲಭೈರವ, ಸಿದ್ಧವಟ, ಸಾಂದಿಪನಿ ಆಶ್ರಮ, ಮಂಗಲನಾಥ ವೇದಶಾಲೆ, ಅಷ್ಟಲಿಂಗ ತೀರ್ಥ, ಏಕಾದಶ ರುದ್ರ, ದೇವೀಸ್ಥಾನ, ಹೀಗೆ ಒಂದಲ್ಲ ಎರಡಲ್ಲ ಅನೇಕ ಪುಣ್ಯಸ್ಥಾನಗಳ ದರ್ಶನವನ್ನು ಪಡೆಯುತ್ತಾರೆ.

ಯಾವ ಸ್ಥಳದಲ್ಲಿ ಮಹಾಕಾಲನಾದ ಪರಮೇಶ್ವರನ ಸನ್ನಿಧಾನವಿದೆಯೋ, ಎಲ್ಲಿ ಸಿಪ್ರಾನದಿಯು ಹರಿಯುತ್ತದೆಯೊ ಅಂಥ ಪವಿತ್ರ ಕ್ಷೇತ್ರದ ದರ್ಶನ ಮಾಡಲು ಯಾರಿಗೆ ಮನಸ್ಸಾಗದು. ಮಹಾಕಾಲನ ದರ್ಶನಮಾತ್ರದಿಂದ ಸಕಲ ದುರಿತಗಳ ನಿವಾರಣೆಯಾಗುವದೆಂದು ಕ್ಷೇತ್ರ ಮಹಾತ್ಮೆಯಲ್ಲಿ ಹೇಳಲಾಗಿದೆ.

ಒಂದು ಕಾಲದಲ್ಲಿ ಈ ಪವಿತ್ರ ಸ್ಥಳವನ್ನು ಅವಂತಿಕಾ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಇದು ಪೃಥ್ವಿಯ ನಾಭಿಸ್ಥಾನವೆಂಬ ನಂಬಿಕೆಯು ಇರುವದು. ಇಲ್ಲಿಯ ಮಹಾಕಾಲನನ್ನು ಜ್ಯೋತಿರ್ಲಿಂಗಗಳಲ್ಲಿ ಒಂದೆಂದು ಭಾವಿಸುವರು. ಭಾರತ ಭೂಮಿಯಲ್ಲಿರುವ ಐವತ್ತೊಂದು ಶಕ್ತಿಪೀಠಗಳಲ್ಲಿ ಉಜ್ಜೈನಿಯೂ ಕೂಡ ಒಂದು. ರುದ್ರಸಾಗರದ ಸಮೀಪದಲ್ಲಿರುವ ಹರಸಿದ್ಧಿ ದೇವಿಯು ಮಹಾಶಕ್ತಿಪೀಠವೆಂದು

ಹೇಳುವುದುಂಟು. ಒಂದು ಕಾಲದಲ್ಲಿ ಭಾರತದಲ್ಲೆಲ್ಲಾ ಬಹು ವಿಜೃಂಭಣೆಯಿಂದ ಕಂಗೊಳಿಸುತ್ತಿದ್ದ ತಾಣವು ಇದಾಗಿತ್ತು. ಮಹಾರಾಜಾ ವಿಕ್ರಮಾದಿತ್ಯನ ಕಾಲದಲ್ಲಿ ಉಜ್ಜೈನಿ ನಗರವು ಆತನ ರಾಜಧಾನಿಯೆಂದೆನಿಸಿಕೊಳ್ಳುತ್ತಿತ್ತು. ಭಾರತದ ಜ್ಯೋತಿಷ್ಯ ಶಾಸ್ತ್ರ ವಿದ್ವಾಂಸರು ಈ ಕ್ಷೇತ್ರದಿಂದ ಅಕ್ಷಾಂಶ ರೇಖಾಂಶ ರೇಖೆಗಳನ್ನು ಗುರುತಿಸುವ ಸಂಪ್ರದಾಯವಿರುವದು. ರಾಷ್ಟ್ರ ಭಾರತದ ಏಳು ಮಹಾನಗರಗಳಲ್ಲಿ ಉಜ್ಜೈನಿ ಮಹಾಪಟ್ಟಣವೆಂದೆನಿಸಿಕೊಂಡಿರುವದು. ಇಲ್ಲಿ ಹನ್ನೆರಡು ವರುಷಗಳಿಗೊಮ್ಮೆ ಪೂರ್ಣಕುಂಭಮೇಳವನ್ನೂ, ಆರು ವರ್ಷಗಳಿಗೊಮ್ಮೆ ಅರ್ಧಕುಂಭಮೇಳವನ್ನೂ ಆಚರಿಸುವ ಪದ್ಧತಿಯು ಇಂದಿಗೂ ನಡೆದುಕೊಂಡು ಬಂದಿರುವದು.

ಈ ಕ್ಷೇತ್ರದಲ್ಲಿ ಹರಿಯುವ ಸಿಪ್ರಾ ನದಿಯು ಭಗವಾನ್ ವಿಷ್ಣುವಿನ ಶರೀರದಿಂದ ಉದ್ಭವವಾದುದೆಂದು ಹೇಳುವರು. ರೈಲು ನಿಲ್ದಾಣದಿಂದ ಕೇವಲ ಒಂದೇ ಮೈಲಿನ ಅಂತರದಲ್ಲಿ ಈ ಮಂಜುಳ ಪ್ರವಾಹವು ನಮ್ಮ ಕಣ್ಮನಗಳನ್ನು ತಣಿಸುವಂತೆ ಹರಿಯುತ್ತಿರುವದನ್ನು ನಾವು ಕಾಣಬಹುದು. ಈ ಪ್ರವಾಹದುದ್ದಕ್ಕೂ ಅನೇಕ ಸ್ನಾನಘಟ್ಟಗಳಿವೆ. ಅವುಗಳಲ್ಲಿ ನರಸಿಂಹಘಟ, ರಾಮಘಟ, ಪಿಶಾಚ ವಿಮೋಚನ ಘಟ, ಗಂಧರ್ವ ಘಟ, ಇವು ಬಹು ಸೊಗಸಾದ ಸ್ನಾಘಟ್ಟಗಳೆನಿಸಿವೆ. ಸಿಪ್ರಾ ನದಿಯ ಸ್ನಾನಕ್ಕಾಗಿ ಗಂಗಾದಶಹರಾ, ಕಾರ್ತೀಕ ಪೌರ್ಣಿಮಾ ಹಾಗೂ ಬೃಹಸ್ಪತಿಯು ಸಿಂಹರಾಶಿಯಲ್ಲಿರುವಾಗ ಭಕ್ತರು ಅಸಂಖ್ಯಾತ ರೀತಿಯಲ್ಲಿ ಸ್ನಾನಕ್ಕೆಂದು ಬರುತ್ತಾರೆ. ಪ್ರವಾಹಕ್ಕೆ ಸೇತುವೆಯನ್ನು ರಚಿಸಲಾಗಿದೆ. ಆ ಸೇತುವೆಯನ್ನು ದಾಟಿ ಪ್ರವಾಹದ ಇನ್ನೊಂದು ಭಾಗವನ್ನು ತಲುಪಿದಾಗ ಅಂಜನೇಯ ದೇವಾಲಯ, ಕೇದಾರೇಶ್ವರ ದೇವಾಲಯ ಹಾಗೂ ಮೊಗಲ್ ಚಕ್ರವರ್ತಿ ಔರಂಗಜೇಬನನ್ನೆದುರಿಸಿ ರಜಪೂತರ ವಂಶವನ್ನುಳಿಸಿದ ದುರ್ಗಾದಾಸನ ಸಮಾಧಿ ಇವೆ ಮೊದಲಾದ ಸ್ಥಳಗಳಿವೆ.

ಮಹಾಕಾಲನ ದೇವಮಂದಿರವು ವಿಶಾಲವಾದ ಪ್ರಾಂಗಣದಿಂದ

ಕೂಡಿದುದಾಗಿದೆ. ದೇವಾಲಯದ ಮೇಲ್ಭಾಗದಲ್ಲಿರುವ ಲಿಂಗವನ್ನು ಓಂಕಾರೇಶ್ವರನೆಂದು, ಆ ಲಿಂಗಕ್ಕೆ ನೇರವಾಗಿ ಸಮಾನಾಂತರದಲ್ಲಿರುವ ಇನ್ನೊಂದು ಲಿಂಗವನ್ನು ಮಹಾಕಾಲೇಶ್ವರ ಲಿಂಗವೆಂದೂ ಪೂಜಿಸುತ್ತಾರೆ. ಇಲ್ಲಿ ಯಾವಾಗಲೂ ತುಪ್ಪದ ನಂದಾದೀಪಗಳಿರುತ್ತವೆ. ಪ್ರಾಂಗಣದಲ್ಲಿ ಸಭಾಮಂಟಪದ ಪರಿಸರದಲ್ಲಿ ಇನ್ನೂ ಅನೇಕ ದೇವಮಂದಿರಗಳಿವೆ. ಒಳಭಾಗದಲ್ಲಿ ಕೋಟಿತೀರ್ಥ ಎಂಬ ಹೆಸರಿನ ಸರೋವರವಿದೆ. ಈ ಸರೋವರದ ಸಮೀಪದಲ್ಲಿ ದೇವಾಸ ರಾಜ್ಯದವರಿಂದ ಕಟ್ಟಿಸಲ್ಪಟ್ಟ ಧರ್ಮಛತ್ರವಿದೆ. ಈ ಕ್ಷೇತ್ರದ ಅಧಿದೇವತೆಯ ಹೆಸರು ಅವಂತಿಕಾದೇವಿ. ಈ ದೇವಿಯ ಸಮೀಪದಲ್ಲಿ ಶ್ರೀ ರಾಮಮಂದಿರವೂ ಇದೆ.

ಉಜ್ಜೈನಿಯಲ್ಲಿ ಶಾಕ್ತ ಪಂಥದವರ ಸಂಖ್ಯೆ ಹೆಚ್ಚು. ಪರ್ವಕಾಲಗಳಲ್ಲಿ ಅವರು ತಮ್ಮ ಸಿದ್ಧಿಗಾಗಿ ಈ ಕ್ಷೇತ್ರಕ್ಕೆ ಬರುತ್ತಾರೆಂಬುದನ್ನು ಅನೇಕರಿಂದ ಕೇಳಿದುದಾಗಿದೆ. ಜ್ಯೋತಿಷ್ಯ ಶಾಸ್ತ್ರಾಭ್ಯಾಸಿಗಳಿಗೆ ಅನೇಕ ಪಾಠಶಾಲೆಗಳೂ ಇಲ್ಲಿವೆ. ಅವಂತಿಕಾ ನಗರವು ಧಾರ್ಮಿಕ ಕ್ಷೇತ್ರದಲ್ಲಿ ಪ್ರಸಿದ್ಧವಾದಂತೆ ಅದರ ರಾಜಕೀಯ ಇತಿಹಾಸವು ಅತ್ಯಂತ ಬೋಧಪ್ರದಾಯಕವಾಗಿದೆ.

# ಕಪಿಸ್ಥಲ

ಮಮಪ್ರಾಣಾ ಹಿ ಪಾಂಡವಾ : ನನ್ನ ಪ್ರಾಣವೇ ಈ ಪಂಚಪಾಂಡವರು ಎಂದು ಸಾರಿದ ಶ್ರೀಕೃಷ್ಣನು ಮುಂದಾಗಬಹುದಾದ ಅನಾಹುತವನ್ನು ತಪ್ಪಿಸಲು ಸಂಧಾನಕ್ಕೆಂದು ಹಸ್ತಿನಾಪುರಕ್ಕೆ ಬಂದಾಗ ಕೊನೆಯ ಪಕ್ಷ ಐದು ಗ್ರಾಮಗಳನ್ನಾದರೂ ಪಾಂಡವರಿಗೆ ಕೊಡಿರಿ ಎಂದು ಕೇಳಿದನಂತೆ. ಹಾಗೆ ಕೇಳಿದ ಐದು ಹಳ್ಳಿಗಳಲ್ಲಿ ಕಪಿಸ್ಥಲವೂ ಒಂದು. ಈ ಮಾತನ್ನು ವ್ಯಾಸಭಾರತದಲ್ಲಿ ಕಾಣಬಹುದು.

ಪೂರ್ವ ಪಂಜಾಬದಲ್ಲಿ ಅತ್ಯಂತ ವಿಸ್ತಾರವಾದ ಜಿಲ್ಲೆ ಎಂದರೆ ಕರ್ನಾಲ. ಕೈಥಲ ಅಥವಾ ಕಪಿಸ್ಥಲವು ಒಂದು ಸಬ್‌ಡಿವಿಜನ್ನಿನಂತೆ ಇಂದು ಪರಿಗಣಿಸಲ್ಪಡುತ್ತದೆ. ಈ ಸ್ಥಳವನ್ನು ಪುರಾಣಗಳು ಕಪಿಸ್ಥಲವೆಂದೇ ಉಲ್ಲೇಖಿಸಿವೆ. ಹೆಸರಿಗೆ ತಕ್ಕಂತೆ ಶ್ರೀರಾಮಚಂದ್ರನ ಪರಮ ಭಕ್ತನಾದ ಹನುಮಂತನಿಗೆ ಈ ಸ್ಥಳವು ಬಹು ಪ್ರಿಯವಾಗಿತ್ತೆಂದು ಪುರಾಣಗಳಿಂದ ತಿಳಿದು ಬರುತ್ತದೆ.

ಕುರುಕ್ಷೇತ್ರದ ಉತ್ತರಭಾಗದಲ್ಲಿ ರೈಲ್ವೆ ಜಂಕ್ಷನ್ನಿನಿಂದ ಇಪ್ಪತ್ತಾರು ಮೈಲಿನ ಅಂತರದಲ್ಲಿ ಈ ಸ್ಥಳವಿದೆ. ನರವಾನಾ ಎಂಬ ಸ್ಟೇಷನ್ನಿಗೆ ಇದು ತೀರ ಸಮೀಪದ ಸ್ಥಳವಾಗಿದೆ. ಇಲ್ಲಿಂದ ಕರ್ನಾಲದವರೆಗೆ ಒಳ್ಳೇ ರಾಜಮಾರ್ಗವಿದೆ. ಬಸ್ಸು ಹಾಗೂ ಕಾರಿನ ಪ್ರವಾಸಕ್ಕೆ ಯೋಗ್ಯವಾದ ಮಾರ್ಗವೆನಿಸಿದೆ.

ಈ ಗ್ರಾಮದ ನಾಲ್ಕೂ ದಿಕ್ಕಿನಲ್ಲಿಯೂ ಐತಿಹಾಸಿಕ ಹಾಗೂ ಧಾರ್ಮಿಕ ಸ್ಥಳಗಳಿವೆ. ಅಲ್ಲದೆ ವೃದ್ಧಕೇದಾರತೀರ್ಥ ಎಂಬ ಹೆಸರಿನ ವಿಶಾಲವಾದ

ಸರೋವರವಿದೆ. ದಂಡೆಯ ಮೇಲೆ ಶಿವದೇವಾಲಯವಿದ್ದು ಚೈತ್ರ ಶುದ್ಧದಲ್ಲಿ ಒಳ್ಳೇ ಜಾತ್ರೆಯು ಕೂಡುತ್ತದೆ. ಸರೋವರದ ಇನ್ನೊಂದು ಭಾಗದಲ್ಲಿ ಚಂಡೀ ದೇವಾಲಯವಿದೆ. ಕಪಿಸ್ಥಲ ಅಥವಾ ಕೈಥಲದಿಂದ ಮೂರು ಮೈಲಿನ ಮೇಲೆ ಮಹಾದೇವನ ಪುತ್ರ ಕಾರ್ತಿಕೇಯನ ಜನ್ಮಸ್ಥಾನವನ್ನು ತೋರಿಸುತ್ತಾರಲ್ಲದೆ ಮಹರ್ಷಿ ನಾರದರು ಈ ಸ್ಥಳಧಲ್ಲಿ ಯಜ್ಞ ಮಾಡಿದರೆಂದು ತೋರಿಸುತ್ತಾರೆ. ಅಲ್ಲದೆ ನಾರದ ಮಹರ್ಷಿಗಳಿಗೆ ಭಗವಾನ್ ವಿಷ್ಣು ಹಾಗೂ ಕೈಲಾಸಪತಿಯಾದ ಮಹದೇವ ಇವರಿಬ್ಬರೂ ಏಕಕಾಲದಲ್ಲಿ ದರ್ಶನವನ್ನಿತ್ತ ಸ್ಥಳವಿದು ಎಂಬ ಭಾವನೆ ಇದೆ. ಆದುದರಿಂದ ಈ ಭಾಗವನ್ನು ಧನ್ಯಜನ್ಮ ಅಥವಾ ಧನಸ್ಥಾನವೆಂದು ಕರೆಯುವ ಸಂಪ್ರಧಾಯವಿದೆ. ಕೈಥಲದಿಂದ ಕೇವಲ ಎರಡು ಮೈಲಿನ ಅಂತರದಲ್ಲಿ ಅಪಗಾ ಎಂಬ ಚಿಕ್ಕ ಹೊಳೆ ಹರಿಯುತ್ತದೆ. ಶ್ರಾವಣ ಕೃಷ್ಣ ಚತುರ್ದಶಿಯ ದಿನ ಇಲ್ಲಿ ಬಹು ದೊಡ್ಡ ಜಾತ್ರೆಯೂ ಕೊಡುತ್ತದೆ. ಕುರುಕ್ಷೇತ್ರದಲ್ಲಿ ಹರಿವ ಏಳು ನದಿಗಳಲ್ಲಿ ಈ ಅಪಗಾ ಎಂಬ ನದಿಯೂ ಒಂದಾಗಿದೆ. ಈ ನದಿಯ ದಂಡೆಯ ಮೇಲೆ ಸಪ್ತಋಷಿಗಳು ಯಜ್ಞ ಮಾಡಿದರೆಂದು ಹೇಳುತ್ತಾರೆ. ಇದೇ ಪರಿಸರದಲ್ಲಿ ವಾಸುಕಿ ಎಂಬ ಯಕ್ಷನ ದೇವಮಂದಿರವಿದೆ. ಇದು ಕುರುಕ್ಷೇತ್ರದ ಪಶ್ಚಿಮ ಶೀಮೆಯನ್ನು ಗುರುತಿಸುವ ಸ್ಥಳವೆನಿಸಿದೆ. ಹೀಗೆ ಕುರುಕ್ಷೇತ್ರದ ಮಹತಿಯನ್ನರಿಯಬೇಕಾದಲ್ಲಿ ಅನೇಕ ದಿನಗಳನ್ನೇ ನಾವು ಕಳೆಯಬೇಕಾಗುವದು.

# ಪ್ರಥೂದಕ ಪರಮ ಪುಣ್ಯಕ್ಷೇತ್ರ

ಗೀತೋಪದೇಶದ ಮುನ್ನ ಕುರುಕ್ಷೇತ್ರವನ್ನು ಧರ್ಮಕ್ಷೇತ್ರವೆಂದು ವರ್ಣಿಸಲಾಗಿದೆ. ಈ ಧರ್ಮಕ್ಷೇತ್ರಕ್ಕಿಂತಲೂ ಮಿಗಿಲಾದುದು ಸರಸ್ವತಿ ನದಿ. ಈ ಪ್ರವಾಹಕ್ಕಿಂತಲೂ ಪುಣ್ಯತಮವಾದ ಸ್ಥಳವೆಂದರೆ ಪ್ರಥೂದಕ ಎಂಬ ಪುಣ್ಯಕ್ಷೇತ್ರ.

ಈ ಪುಣ್ಯಕ್ಷೇತ್ರವು ಪಂಜಾಬದಲ್ಲಿರುವ ಅಂಬಾಲಾ ಜಿಲ್ಲೆಯಲ್ಲಿ ಹರಿಯುವ ಸರಸ್ವತಿ ನದಿ ಪ್ರವಾಹದ ಎಡಭಾಗದಲ್ಲಿದೆ. ಇಂದು ಈ ಕ್ಷೇತ್ರವನ್ನು ಪ್ರಥೂದಕ ಎಂದು ಕರೆಯುತ್ತಾರೆ. ಮಹಾ ರಾಜಾಧಿರಾಜನಾದ ಪ್ರಥು ರಾಜನು ತನ್ನ ತಂದೆಯ ಅಂತ್ಯೇಷ್ಟಿಯ ಕರ್ಮಗಳನ್ನೆಲ್ಲ ಈ ಪ್ರವಾಹದ ದಂಡೆಯಲ್ಲಿ ಮಾಡಿದನಂತೆ. ಈ ಭಾಗದಲ್ಲಿ ಪ್ರಾಚೀನ ಕಾಲದಲ್ಲಿ ಚಲಾವಣೆಯಲ್ಲಿದ್ದ ಅನೇಕ ನಾಣ್ಯಗಳು ಕಾಣಸಿಕೊಂಡಿವೆ.

ಗಯನಿ ಮಹಮ್ಮದ ಹಾಗೂ ಘೋರಿ ಮಹಮ್ಮದ ಮೊದಲಾದವರ ದಾಳಿಯಿಂದಾಗಿ ಈ ಕ್ಷೇತ್ರವು ಅನೇಕ ಸಲ ಲೂಟಿ ಮಾಡಲ್ಪಟ್ಟಿತು. ಪ್ರವಾಹದ ದಂಡೆಯ ಮೇಲಿರುವ ದೇವಾಲಯಗಳೆಲ್ಲ ಧ್ವಂಸವಾಗಿದ್ದವು. ಮಹಮ್ಮದೀಯರ ದಬ್ಬಾಳಿಕೆಗಳಿಂದಾಗಿ ಈ ಕ್ಷೇತ್ರಕ್ಕೆ ಹೋಗಿಬರಲು ಪ್ರವಾಸಿಗರಿಗೆ ಬಲು ತೊಂದರೆಗಳಾಗುತ್ತಿದ್ದವು. ಈ ಹಿಂಸೆಯನ್ನು ತಾಳಲಾರದೆ ಪಂಜಾಬದ ಸಿಕ್ಕರು ಸಿಡಿದೆದ್ದು ನಿಂತರು. ಪರಕೀಯರಿಂದ ಈ ಕ್ಷೇತ್ರವನ್ನುಳಿಸಿಕೊಂಡರು. ಇಲ್ಲಿ ಮಧುಶ್ರವಾ, ಶತಶ್ರವಾ, ಯಯಾತಿ, ಬೃಹಸ್ಪತಿ ಎಂಬ ಹೆಸರಿನ ತೀರ್ಥಗಳಿವೆ.

ಮಹಾರಾಜನಾಗಿದ್ದ ವೇನನ ಮಗನಾದ ಪ್ರಥೂದಕನಿಂದಲೇ ಈ

ಕ್ಷೇತ್ರವು ಪ್ರಸಿದ್ಧಿಗೆ ಬರುವಂತಾಯಿತು. ಪುಣೆಯ ಪೇಶ್ವೆಯರ ಕಾಲದಲ್ಲಿ ಕಾಬೂಲದವರೆಗೆ ಅವರು ತಮ್ಮ ಸೈನ್ಯಾಚರಣೆಯನ್ನು ಮಾಡಿದರು. ಅವರು ಇಲ್ಲಿಯ ದೇವಾಲಯಗಳನ್ನೆಲ್ಲ ಪುನರ್ನಿರ್ಮಾಣ ಮಾಡಿದರು.

ಇಲ್ಲಿ ಸರಸ್ವತಿ ದೇವಿಯ ಮಂದಿರದೊಂದಿಗೆ ಚತುರ್ಮುಖ ಬ್ರಹ್ಮದೇವನ ಮಂದಿರವೂ ಇದೆ. ನಾಲ್ಕು ಮುಖದ ಲಿಂಗವನ್ನೇ ಚತುರ್ಮುಖ ಬ್ರಹ್ಮದೇವನೆಂದು ಪೂಜಿಸುತ್ತಾರೆ. ಈ ದೇವಾಲಯದಲ್ಲಿರುವ ಪಂಚಲೋಹದ ಸುಂದರವಾದ ಆಂಜನೇಯನ ವಿಗ್ರಹವಂತೂ ಭಕ್ತರ ಕಣ್ಮನಗಳನ್ನೂ ತಣಿಸುತ್ತದೆ. ಇದೇ ಪ್ರವಾಹದ ದಂಡೆಯ ಮೇಲೆ ಉತ್ತುಂಗ ಮಹಾರಾಜ ಹಾಗೂ ಮೋದಲಾದವರು ತಪಗೈದರೆಂದು ಹೇಳುತ್ತಾರೆ. ಇಲ್ಲಿರುವ ಸರಸ್ವತಿ ನದಿಯ ಪ್ರವಾಹವನ್ನು ವರ್ಣಿಸುವಾಗ ಹಾಲು, ತುಪ್ಪ, ಮಧುವಿನಂತೆ ಹರಿಯುವದೆಂದು ವರ್ಣಿಸಲಾಗಿದೆ. ಕುರುಕ್ಷೇತ್ರದಲ್ಲಿರುವ ಏಳು ಫಲಭರಿತ ವನಗಳಲ್ಲಿ ದೃಶದ್ವತಿ ದಂಡೆಯ ಮೇಲಿರುವ ವನವೂ ಸಹ ಒಂದಾಗಿದೆ. ನಿಸರ್ಗ ರಮಣೀಯವಾದ ತಾಣವೆನಿಸಿದೆ.

# ಪವಿತ್ರ ಕ್ಷೇತ್ರ ನೈಮಿಷಾರಣ್ಯ

ಸಾಮಾನ್ಯವಾಗಿ ಯಾವ ಪುರಾಣವನ್ನೇ ನೋಡಿದರೂ, ಸೂತರು ನೈಮಿಷಾರಣ್ಯದಲ್ಲಿರುವ ಶೌನಕಾದಿಗಳಿಗೆ, ಈ ಕಥೆಯನ್ನು ಹೇಳಿದರು ಎಂಬ ರೀತಿಯಲ್ಲಿಯೇ, ಕಥಾ ಭಾಗವು ಪ್ರಾರಂಭವಾಗುತ್ತದೆ. ಹೀಗಿರುವಾಗ ದಾರ್ಶನಿಕ ಮರ್ಮಗಳನ್ನೊಳಗೊಂಡ ಈ ಪುರಾಣಗಳನ್ನು ಹೇಳಿದ ಹಾಗೂ ಕೇಳಿದವರ ಬಗ್ಗೆ ಮತ್ತು ನೈಮಿಷಾರಣ್ಯದ ವಿಚಾರವಾಗಿ ನಾವು ಸರಿಯಾದ ಮಾಹಿತಿಗಳನ್ನು ತಿಳಿದುಕೊಳ್ಳುವದು ಹಿತವೆನಿಸುತ್ತದೆ.

ವಾಯು ಪುರಾಣ ಹಾಗೂ ಮಾಘ ಮಹಾತ್ಮ್ಯ ಮೊದಲಾದ ಗ್ರಂಥಗಳಲ್ಲಿ, ನೈಮಿಷಾರಣ್ಯವನ್ನು ಮೂರು ಲೋಕಗಳಲ್ಲಿಯೇ ಪವಿತ್ರ ತೀರ್ಥಕ್ಷೇತ್ರವೆಂದು ವರ್ಣಿಸಲಾಗಿದೆ. ಈ ಸ್ಥಳದಲ್ಲಿ ಮಾಡಿದ ಯಜ್ಞ, ಯಾಗ, ಜಪ, ತಪ, ಹೋಮ ಹವನಾದಿಗಳೊಂದಿಗೆ ಮಾಡುವ ದಾನಧರ್ಮಗಳಿಂದಾಗಿ, ಏಳು ಜನ್ಮದ ಪಾಪವು ಪರಿಹಾರವಾಗುವುದೆಂಬ ಭರವಸೆಯ ಮಾತನ್ನೂ ಸಹ ಪುರಾಣಗಳು ತಿಳಿಸಿವೆ. ಲೋಮಹರ್ಷನ ಪುತ್ರ ಸೌತಿ ಉಗ್ರಶ್ರವನು ಇದೇ ಕ್ಷೇತ್ರದಲ್ಲಿ ಋಷಿಗಳಿಗೆ ಪುರಾಣಗಳನ್ನು ಶ್ರವಣ ಮಾಡಿಸಿದನಂತೆ.

*ಏತತ್ತು ಶ್ರೇಷ್ಠತಮಂ ಕ್ಷೇತ್ರಂ ನೈಮಿಷಾರಣ್ಯ ಸಂಜ್ಞಿತಮ್ ।*
*ಅಧಿಷ್ಠಾಯಾದ್ಯಾಪಿ ವಿಪ್ರಾಃ ಕುರ್ವಂತಿ ಸತ್ಕ್ರಿಯಾಃ ಸದಾ ॥*

*( ಬೃಹದ್ಧರ್ಮ ಪುರಾಣ )*

ವಾಯುಪುರಾಣದಲ್ಲಿರುವ (11 ರಿಂದ 108) ಶ್ಲೋಕಗಳ ಅನುಸಾರವಾಗಿ, ಭಗವಾನ್ ನಾರಾಯಣನಿಂದ, ನಿಮಿಷಮಾತ್ರದಲ್ಲಿ

ದಾನವರ ಸಂಹಾರವಾದುದರಿಂದ, ಈ ಸ್ಥಳವನ್ನು ನೈಮಿಷಾರಣ್ಯವೆಂಬ ಹೆಸರಿನಿಂದ ಕರೆಯತೊಡಗಿದರೆಂದು ಹೇಳಲಾಗಿದೆ. ಇನ್ನು ಕೂರ್ಮಪುರಾಣದಲ್ಲಿ, ಶ್ರೀಮನ್ನಾರಾಯಣನು ಧಾರಣಮಾಡಿದ ಸುದರ್ಶನಚಕ್ರವು, ಈ ಸ್ಥಳದಲ್ಲಿ ನಿಲ್ಲುವಂತಾದುದರಿಂದ, ಈ ಕ್ಷೇತ್ರವನ್ನು ನೈಮಿಷಾರಣ್ಯವೆಂದು ಕರೆಯಲಾಯಿತೆಂದು ಇನ್ನೊಂದು ಸಂದರ್ಭದಲ್ಲಿ ಹೇಳಲಾಗಿದೆ.

ಮಹರ್ಷಿಗಳಾದ ಶೌನಕರ ಮನದಲ್ಲಿ, ದೀರ್ಘ ಕಾಲದವರೆಗೆ, ತಾವು ಒಂದು ಸ್ಥಳದಲ್ಲಿದ್ದುಕೊಂಡು ಜ್ಞಾನಯಜ್ಞದಲ್ಲಿ ನಿರತರಾಗಬೇಕೆಂಬ ಹಂಬಲವಾಯಿತು. ಮುನಿಗಳು ಪ್ರಾರಂಭಿಸಿದ ಈ ಜ್ಞಾನಕಾರ್ಯದಿಂದ ಸುಪ್ರೀತನಾದ ಬ್ರಹ್ಮದೇವನು ಆ ಮುನಿಗಳಿಗೆ ಒಂದು ಚಕ್ರವನ್ನಿತ್ತು ಅದನ್ನುರುಳಿಸುತ್ತಾ ಹೋಗುವಂತೆ ಹೇಳಿ, ಯಾವ ಸ್ಥಳದಲ್ಲಿ ಆ ಚಕ್ರವು ನಿಲ್ಲುವದೋ, ಆ ಸ್ಥಳವನ್ನು ಪರಮ ಪವಿತ್ರವಾದ ಸ್ಥಳವೆಂದು ಭಾವಿಸಿ, ಅದೇ ಸ್ಥಳದಲ್ಲಿ ಆಶ್ರಮವಾಸಿಗಳಾಗಿ ಜ್ಞಾನಕಾರ್ಯವನ್ನು ಮುಂದುವರೆಸಿಕೊಂಡು ಹೋಗಲು ಅಪ್ಪಣೆಯನ್ನು ಮಾಡಿದನಂತೆ. ಇದರಿಂದಾಗಿ ಅನೇಕ ಋಷಿ ಮುನಿಗಳು, ಅವರನ್ನು ಹುಡುಕಿಕೊಂಡು ಬರತೊಡಗಿದರು. ಯಾವ ಸ್ಥಳದಲ್ಲಿ ಆ ಚಕ್ರವು ಭೂಗರ್ಭವನ್ನು ಸೇರಿತೋ, ಆ ಸ್ಥಳವು ಗೋಮತೀ ನದಿಯ ಪೂರ್ವ ಭಾಗದಲ್ಲಿರುವದು. ಭರತಖಂಡದಲ್ಲಿರುವ ಐವತ್ತೊಂದು ಪಿತೃಸ್ಥಾನಗಳಲ್ಲಿ, ನೈಮಿಷಾರಣ್ಯವು ಮಹಾ ಪವಿತ್ರವಾದ ಸ್ಥಲವೆಂದೆನಿಸಿಕೊಂಡಿರುವದು. ಸೋಮವತಿ ಅಮಾವಾಸ್ಯೆಯ ದಿನ, ಇಲ್ಲಿ ಜಾತ್ರೆಯಾಗುವದುಂಟು.

ಶೌನಕರು ಇದೇ ಸ್ಥಳದಲ್ಲಿ ವೇದವ್ಯಾಸರಿಂದ ರಚಿಸಲ್ಪಟ್ಟ ಪುರಾಣಗಳ ಕಥೆಯನ್ನು ತಮ್ಮ ಶಿಷ್ಯರಾದ ಸೂತಮುನಿಗಳಿಗೆ ತಿಳಿಸಿದರು. ದ್ವಾಪರದಲ್ಲಿ ಈ ಕ್ಷೇತ್ರಕ್ಕೆ ಬಲರಾಮನೂ ಸಹ ತೀರ್ಥಯಾತ್ರೆಗೆಂದು ಬಂದು ಹೋದದ್ದುಂಟು. ಆಕಸ್ಮಿಕವೆಂಬಂತೆ ಸೂತಪುತ್ರನೊಬ್ಬ ಬಲರಾಮನಿಂದ ಹತನಾದ. ಆಗ ಬಲರಾಮನು ಆತನ ಪುತ್ರನಿಗೆ "ನೀನು ಪುರಾಣಗಳ

ವಕ್ತಾರನಾಗು'' ಎಂದು ವರವನ್ನಿತ್ತು ಅನುಗ್ರಹಿಸಿದನಂತೆ. ಇಲ್ಲಿ ವಾಸ ಮಾಡುತ್ತಿದ್ದ ಬಲ್ವ ಎಂಬ ದೈತ್ಯನಿಂದ ತುಂಬ ತೊಂದರೆಗಳಾಗುತ್ತಿದ್ದವು. ಅದನ್ನು ತಿಳಿದ ಬಲರಾಮನು ತನ್ನ ಭಾರತಸಂಚಾರ ಕ್ರಮದಲ್ಲಿ ಪುನಃ ಈ ಕ್ಷೇತ್ರಕ್ಕೆ ಬಂದು ಆ ದೈತ್ಯನನ್ನು ಸಂಹಾರಮಾಡಿದುದಲ್ಲದೆ, ತಾನೇ ಖುದ್ದಾಗಿ ನಿಂತು ಬಹು ದೊಡ್ಡ ಯಜ್ಞಮಾಡಿದನೆಂದು ಪುರಾಣಗಳಿಂದ ತಿಳಿದು ಬರುವದು.

ಈ ಸ್ಥಳವು ಉತ್ತರ ರೈಲ್ವೇ ವಿಭಾಗದಲ್ಲಿ ಬಾಲಾರಾಮಎಂಬ ರೈಲ್ವೇ ಜಂಕ್ಷನ್ನಿನಿಂದ ಹದಿಮೂರು ಮೈಲಿನ ಅಂತರದಲ್ಲಿ ನೈಮಿಷಾರಣ್ಯವೆಂಬ ಹೆಸರಿನ ರೈಲ್ವೆ ನಿಲ್ದಾಣವಿದೆ. ಈ ನಿಲ್ದಾಣದಿಂದ ಒಂದು ಮೈಲಿನ ಅಂತರದಲ್ಲಿ ಚಕ್ರತೀರ್ಥವಿದೆ. ಇದೊಂದು ಸರೋವರವಿದ್ದು, ಮಧ್ಯಭಾಗದಲ್ಲಿ ಸದಾ ಕಾಲವೂ ನೀರು ಪುಟಿಯುತ್ತಿರುತ್ತದೆ. ಇದನ್ನು ನೈಮಿಷಾರಣ್ಯದ ಮಧ್ಯಬಿಂದುವೆಂದು ಭಾವಿಸುತ್ತಾರೆ. ಸರೋವರದ ದಂಡೆಗುಂಟ ಅನೇಕ ದೇವಮಂದಿರಗಳಿವೆ.

ನೈಮಿಷಾರಣ್ಯದ ಬಾಹ್ಯವ್ಯಾಪ್ತಿಯು ಎಂಭತ್ನಾಲ್ಕು ಹರದಾರಿಯಿಂದ ಕೂಡಿದೆ ಎಂದು ಹೇಳಿದ್ದಾರೆ. ಆದರೆ ಅದರ ಒಳಭಾಗದ ಪರಿಕ್ರಮವು ಮಾತ್ರ ಆರು ಮೈಲಿಗಳಷ್ಟಾಗುತ್ತದೆ. ಈ ಪ್ರಾಕಾರದಲ್ಲಿ ಚಕ್ರತೀರ್ಥ, ಪಂಚಪ್ರಯಾಗ ಎಂಬ ಸರೋವರಗಳಿದ್ದು ಆ ಸರೋವರದ ದಂಡೆಯ ಮೇಲೆ ಅಕ್ಷಯ ವಟವೃಕ್ಷವಿದೆ. ಈ ಭಾಗದಲ್ಲಿ ಲಲಿತಾ ದೇವಿಯ ಮಂದಿರವು ಪ್ರಧಾನವಾದುದಾಗಿದೆ. ಅನ್ನಪೂರ್ಣ ಹಾಗೂ ವಿಶ್ವನಾಥ ದೇವಾಲಯುಗಳೂ ಇವೆ. ಇದೇ ಸ್ಥಳದಲ್ಲಿ ಯಾತ್ರಾರ್ಥಿಗಳು ಪಿಂಡಪ್ರದಾನಾದಿಗಳನ್ನು ಮಾಡುತ್ತಾರೆ. ಇದೇ ಪರಿಸರದಲ್ಲಿ ವ್ಯಾಸಶುಕದೇವಸ್ಥಾನ, ಧರ್ಮರಾಜಮಂದಿರ, ರಾಧಾಕೃಷ್ಣ ಹಾಗೂ ಬಲರಾಮ ದೇವಾಲಯಗಳಿವೆ.

ನಾರದಾನಂದ ಮಹಾರಾಜರ ಆಶ್ರಮವು ಸಾಧಕರಿಗೆಲ್ಲ ಒಳ್ಳೇ

ಆಶ್ರಯಸ್ಥಾನವಾಗಿದೆ. ಸನಾತನ ಸಂಪ್ರದಾಯ ರೀತಿಯಲ್ಲಿ ಬ್ರಹ್ಮಚಾರಿಗಳಿಗೆ ಇಲ್ಲಿ ಪಾಠ ಪ್ರವಚನಗಳು ನಡೆಯುತ್ತವೆ. ಸಮಸ್ತ ತೀರ್ಥಾಭಿಮಾನಿ ದೇವತೆಗಳು ನೈಮಿಷಾರಣ್ಯದಲ್ಲಿ ವಾಸ ಮಾಡುತ್ತಾರೆಂಬ ನಂಬಿಕೆಯಿಂದ, ಬಿಡುವಿಲ್ಲದ ರೀತಿಯಲ್ಲಿ ಯಾತ್ರಾರ್ಥಿಗಳು ಈ ಕ್ಷೇತ್ರಕ್ಕೆ ಬಂದು ಪುನೀತರಾಗಿ ಮರಳುತ್ತಾರೆ.

# ಬ್ರಹ್ಮಾವರ್ತ

ವಿಶ್ವಕರ್ಮನು ಮಾನವ ಕಲ್ಯಾಣಕ್ಕಾಗಿ ಅಶ್ವಮೇಧ ಯಜ್ಞವನ್ನು ಮಾಡಿದ. ಸೃಷ್ಟಿಕರ್ತನಾದ ವಿಷ್ಣು ಆ ಸ್ಥಳದಲ್ಲಿ ಜನವಸತಿಯು ಕಾಣುವಂತಾಗಲು ಬ್ರಹ್ಮನಿಗೆ ಆಜ್ಞಾಪಿಸಿದ. ಬ್ರಹ್ಮದೇವನು ತಾಪಸಿಗರು ಬಂದು ಆ ಸ್ಥಳದಲ್ಲಿ ವಾಸವಾಗುವಂತೆ ನೋಡಿಕೊಂಡನು. ಕೇವಲ ತಪಸ್ಸಿನಲ್ಲಿಯೇ ಸಾಧಕರು ತಮ್ಮ ಆಯುಷ್ಯವನ್ನು ಕಳೆಯತೊಡಗಿದರು. ಜನವಸತಿಯು ಬೆಳೆಯಲಿಲ್ಲ. ಆಗ ಸ್ವತಃ ಬ್ರಹ್ಮದೇವನೇ ಉಪಿಲಾರಣ್ಯದಲ್ಲಿ ಒಂದು ಯಜ್ಞವನ್ನು ಮಾಡಿದ. ಆ ಸ್ಥಳದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದ. ಆದರಿಂದಾಗಿ ಆ ದೇವನನ್ನು ಬ್ರಹ್ಮೇಶ್ವರ ದೇವನೆಂದು ಕರೆಯತೊಡಗಿದರು. ಯಜ್ಞಸಮಾಪ್ತಿಯ ನಂತರ ಸ್ವಾಯಂಭುಮನು ಆತನ ಪತ್ನಿಯಿಂದೊಡಗೂಡಿಕೊಂಡು ಸೃಷ್ಟಿಯ ಕಾರ್ಯವನ್ನಾರಂಭಿಸಿದನು. ಯಜ್ಞ ಮಾಡಿದ ಸ್ಥಳದಲ್ಲಿ ಬ್ರಹ್ಮದೇವನಿಂದ ಕುದುರೆಯ ನಾಲಪು ಪ್ರತಿಷ್ಠಾಪಿಸಲ್ಪಟ್ಟಿತು. ಈ ಎಲ್ಲ ಘಟನೆಗಳಿಂದಾಗಿ ಮುಂದೆ ಉತ್ಪಲಾರಣ್ಯಕ್ಕೆ ''ಬ್ರಹ್ಮಾವರ್ತ''ವೆಂದು ಕರೆಯತೊಡಗಿದರು. ಈ ಸ್ಥಳವು ಕಾನಪುರದ ಹತ್ತಿರ ಗಂಗಾತಟಾಕದಲ್ಲಿದೆ.

### ಉತ್ತಾನಪಾದ ಹಾಗೂ ಧ್ರುವಮಹಾರಾಜ

ಬ್ರಹ್ಮಾವರ್ತ ಪ್ರದೇಶವು ಬಹುಕಾಲ ಉತ್ತಾನಪಾದ ರಾಜನ ಸ್ವಾಧೀನದಲ್ಲಿತ್ತು. ಆತನ ಕಾಲಾವಧಿಯಲ್ಲಿ ಸರಸ್ವತಿ ಹಾಗೂ ದೃಶದ್ವತಿ ಎಂಬ ನದಿಗಳು ಈ ಭಾಗದಲ್ಲಿ ಹರಿದು ಗಂಗೆಯ ಪ್ರವಾಹಕ್ಕೆ ಬಂದು ಕೂಡುತ್ತಿದ್ದವು. ಬ್ರಹ್ಮಾವರ್ತದಲ್ಲಿ ಹರಿವ ಗಂಗಾನದಿಯ ಇನ್ನೊಂದು

ದಂಡೆಯ ಮೇಲಿರುವ ಅತಿ ಪುರಾತನವೆಂದು ತೋರುವ ಕೋಟೆಯಲ್ಲಿ ಉತ್ತಾನಪಾದನ ಮಗ ಧ್ರುವರಾಜನು ಜನ್ಮತಾಳಿದನೆಂದು ತೋರಿಸುವದುಂಟು. ಈ ಮಾತಿಗೆ ಸಾಕ್ಷೀಭೂತವಾಗಿ ಧ್ರುವಮಹಾರಾಜನ ದೇವಮಂದಿರವನ್ನು ಸಹ ತೋರಿಸುವರು. ಈ ಭಾಗವನ್ನೆಲ್ಲ 1904ರಲ್ಲಿ ಭಾರತ ಸರಕಾರವು ರಾಷ್ಟ್ರೀಯ ಸ್ಮಾರಕವೆಂದು ಘೋಷಿಸಿತು.

### ರಾಮಾಯಣ ಕಾಲದ ಕುರುಹುಗಳು

ಮಹಾಮುನಿ ವಾಲ್ಮೀಕಿ ಋಷಿಗಳು ಇದೇ ಬ್ರಹ್ಮಾವರ್ತ ಅಥವಾ ಉತ್ಪಲಾರಣ್ಯದಲ್ಲಿ ಆಶ್ರಮವಾಸಿಗಳಾಗಿದ್ದರು. ಈ ಮಾತಿಗೆ ಸಾಕ್ಷೀಭೂತವೆಂಬಂತೆ ಇಂದಿಗೂ ವಾಲ್ಮೀಕಿ ಮುನಿಗಳ ಆಶ್ರಮದ ಸ್ಥಳವನ್ನು ತೋರಿಸುವದುಂಟು. ಪುಣೆಯ ಎರಡನೇ ಬಾಜೀರಾವ್ ಪೇಶ್ವೆಯ ಕಾಲದಲ್ಲಿ ಆತನ, ಆಜ್ಞಾನುಸಾರ ಈ ಆಶ್ರಮವನ್ನು ಜೀರ್ಣೋದ್ಧಾರ ಮಾಡಲಾಯಿತು. ಈ ಆಶ್ರಮದ ಸಮೀಪದಲ್ಲಿಯೇ ಶ್ರೀರಾಮಪತ್ನಿ ಸೀತಾಮಾತೆಯು ಭೂಗರ್ಭ ಪ್ರವೇಶ ಮಾಡಿದಳಂತೆ. ಶ್ರೀ ರಾಮಚಂದ್ರನ ಆಜ್ಞಾನುಸಾರವಾಗಿ ಬಿಡಲ್ಪಟ್ಟ ಯಜ್ಞಾಶ್ವವನ್ನು ಇದೇ ಪರಿಸರದಲ್ಲಿ ಲವ-ಕುಶರು ಅದನ್ನು ಹಿಡಿದು ಕಟ್ಟಿದರು. ಅಣ್ಣನ ಆಜ್ಞಾನುಸಾರ ಲಕ್ಷ್ಮಣನು ಗರ್ಭವತಿಯಾಗಿದ್ದ ತನ್ನ ಅತ್ತಿಗೆಯನ್ನು ಇದೇ ಉತ್ಪಲಾರಣ್ಯದಲ್ಲಿ ಪೆರಿಯಾರ್ ಎಂಬ ದೇವಾಲಯದಲ್ಲಿ ಬಿಟ್ಟು ಹೋಗಿದ್ದನಂತೆ. ಅಂದಿನ ಕಾಲದಲ್ಲಿ ಈ ದೇವಾಲಯದ ಮುಂದೆ ಗಂಗೆ ಹರಿಯುತ್ತಿದ್ದಳು. ಅನಾಥಳಂತೆ ದುಃಖಿಸುತ್ತಿದ್ದ ಸೀತಾಮಾತೆಯನ್ನು ಕರೆತಂದು ವಾಲ್ಮೀಕಿ ಋಷಿಗಳು ತಮ್ಮ ಆಶ್ರಮದಲ್ಲಿರುವಂತೆ ನೋಡಿಕೊಂಡರು. ಯಾವ ಸ್ಥಳದಲ್ಲಿ ಸೀತಾಮಾತೆ ವಾಸವಾಗಿದ್ದಳೋ ಆ ಸ್ಥಳದಲ್ಲಿ ಇಂದು ಸೀತಾಕುಂಡವಿರುವುದನ್ನು ತೋರಿಸುವರು. ನವರಾತ್ರಿಯ ದಸರೆಯಂದು ಇಲ್ಲಿ ಲಕ್ಷ ದೀಪೋತ್ಸವವು ನಡೆಯುವದುಂಟು. ಅಶ್ವಮೇಧದ ಕುದುರೆಯನ್ನು ಲವಕುಶರು ಹಿಡಿದಿಟ್ಟಿರುವಾಗ ಅವರೊಂದಿಗೆ ಹೋರಾಡಿದವರೆಲ್ಲರೂ ಮೃತಪಟ್ಟರು.

ಕೊನೆಗೊಮ್ಮೆ ಶ್ರೀರಾಮಚಂದ್ರನೇ ಆ ಸ್ಥಳಕ್ಕೆ ಬರಬೇಕಾಯಿತು. ತಂದೆ ಮಕ್ಕಳ ಹೋರಾಟದಲ್ಲಿ ಲವಕುಶರು ಮೂರ್ಛಿತರಾದಾಗ ವಾಲ್ಮೀಕಿ ಮುನಿಗಳ ಆರೈಕೆಯಿಂದ ಅವರು ಪುನಃ ಹೋರಾಡತೊಡಗಿದರು. ಪೆರಿಯಾರ್ ಈ ಶಬ್ದವು ಸಂಸ್ಕೃತ ಮೂಲದಿಂದ ಬಂದದ್ದು. ಅದನ್ನು ಅಪಭ್ರಂಶಗೊಳಿಸಿ ಪರಿಹಾರ ಎಂಬ ಅರ್ಥ ಬರುವಂತೆ ಮಾಡಿದರು. ಹಿಂದಿನ ಕಾಲದಲ್ಲಿ ಇದೇ ಸ್ಥಳದಲ್ಲಿ ಲವಕುಶರು ಅಂದು ಯುದ್ಧದಲ್ಲಿ ಬಳಸಿದ ಬೃಹದಾಕಾರದ ಬಾಣವು ಗಂಗಾ ನದಿಯ ಮಣ್ಣಿನಲ್ಲಿ ಹೂತು ಹೋದುದನ್ನು ಹೊರತೆಗೆದು ನದಿಯ ದಂಡೆಯ ಮೇಲಿರುವ ದೇವಮಂದಿರದಲ್ಲಿ ಇಂದು ತಂದಿರಿಸಲಾಗಿದೆ. ಆ ಬಾಣವು ಬಹು ದೊಡ್ಡದಾಗಿದೆ. ಈ ದೇವಮಂದಿರದ ಸಮೀಪದಲ್ಲಿಯೇ ರಾಮೇಲ ಎಂಬ ಹಳ್ಳಿಯೊಂದಿದೆ. ಪಿತಾಪುತ್ರರ ಸಮ್ಮಿಳನವಾದ ಸ್ಥಳವು ಇದು. ಆದುದರಿಂದ ರಾಮ ಮಿಲನವು ರಾಮೇಲ ಎಂದಾಗಿರುವುದಾಗಿ ಹೇಳುತ್ತಾರೆ.

## ಮಹಮ್ಮದೀಯರ ಆಳ್ವಿಕೆಯಲ್ಲಿ ಬ್ರಹ್ಮಾವರ್ತ

ಮೊಗಲ್ ಸಾಮ್ರಾಟನಾದ ಅಕಬರನ ಕಾಲದಲ್ಲಿ ಈ ಭಾಗವೆಲ್ಲ ಆಗ್ರಾ ಸುಭಾದಲ್ಲಿಯ ಕನೋಜ್ ಸರ್ಕಾರದ ಅಧೀನದಲ್ಲಿ ಒಂದು ಪರಗಣೆಯ ರೂಪದಲ್ಲಿತ್ತು. ಇ.ಸ. 1735ರಲ್ಲಿ ಈ ಭಾಗವು ಕಾನಪುರ ಜಿಲ್ಲೆಗೆ ಸೇರಿಸಲ್ಪಟ್ಟಿತ್ತು. ಇ.ಸ. 1754ರಲ್ಲಿ ಈ ಭಾಗವೆಲ್ಲ ಪುಣೆಯ ಪೇಶ್ವೆಯವರ ಸ್ವಾಧೀನದಲ್ಲಿತ್ತು. ಮುಂದೆ ಇ.ಸ. 1774 ರಿಂದ 75 ರವರೆಗೆ ಬೀಠೂರು (ಬ್ರಹ್ಮಾವರ್ತ) ಅಯೋಧ್ಯಾ ನವಾಬರ ಸ್ವಾಧೀನಕ್ಕೆ ಹೋಯಿತು. ನವಾಬರು ಇದನ್ನು ತಮ್ಮ ವಜೀರ ರಾಜಾ ಭಾಗಮಲ್ಲನ ಸ್ವಾಧೀನಕ್ಕೊಪ್ಪಿಸಿದರು. ಕಾಲಾಂತರದಲ್ಲಿ ಜಮೀನ್‌ದಾರಿ ಪದ್ಧತಿಯನ್ನು ಈ ಭಾಗದಲ್ಲಿ ತೆಗೆದು ಹಾಕಲಾಯಿತು. ಅಲ್ಲಾಸಲೀಮ್ ಖಾನ್ ಎಂಬಾತನಿಂದ ಇಲ್ಲಿ ಮಸೀದಿಯನ್ನು ಕಟ್ಟಿಸಲಾಯಿತು. ಅದೇ ಕಾಲದಲ್ಲಿ ರಾಜಾ ಭಾಗಮಲ್ಲನು ಗಂಗಾ ತೀರದ ದಂಡೆಗುಂಟ ಸ್ನಾನಘಟ್ಟಗಳನು

ನಿರ್ಮಿಸಿದನು. ಹಿಂದಿನ ಕಾಲದಲ್ಲಿ ದಕ್ಷಿಣದಿಂದ ಕಾಶಿಗೆ ಪ್ರಯಾಣ ಮಾಡುತ್ತಿದ್ದ ಪಾದಚಾರಿಗಳಿಗೆಲ್ಲಾ ಗಂಗೆಯ ಪ್ರಥಮ ದರ್ಶನವು ಇದೇ ಪವಿತ್ರ ಕ್ಷೇತ್ರ ಬ್ರಹ್ಮಾವರ್ತದಲ್ಲಿ ಲಭಿಸುತ್ತಿತ್ತು.

### ಆಂಗ್ಲರ ಕಾಲದಲ್ಲಿ ಬೀಠೂರ

ನವೆಂಬರ್ 10, 1801ನೇ ಇಸ್ವಿಯಲ್ಲಿ ಅಯೋಧ್ಯಾ ನವಾಬನೊಂದಿಗೆ ಮಾಡಿಕೊಂಡಿದ್ದ ಒಪ್ಪಂದದಂತೆ ನವಾಬ ಸುಜಾ ಉದ್ದೌಲಾ ಈತನು ಕಾನಪೂರ ಜಿಲ್ಲೆಯ ವಿಸ್ತಾರವಾದ ಭೂಪ್ರದೇಶವನ್ನೆಲ್ಲ ಈಸ್ಟ್ ಇಂಡಿಯಾ ಕಂಪನಿಗೆ ಒಪ್ಪಿಸಬೇಕಾಯಿತು. ಆಗ ಆಂಗ್ಲರು ಬೀಠೂರನ್ನು ತಮ್ಮ ಸೇನಾ ಕೇಂದ್ರವನ್ನಾಗಿ ಮಾಡಿಕೊಂಡರು.

### ಬೀಠೂರು - ಬ್ರಹ್ಮಾವರ್ತದಲ್ಲಿ ನಡೆದ ಕ್ರಾಂತಿ

ಬೀಠೂರು ಗಂಗಾನದಿಯ ದಂಡೆಯ ಮೇಲೆ 80.16 ಅಕ್ಷಾಂಶ ಹಾಗೂ 26.37 ರೇಖಾಂಶದಲ್ಲಿದ್ದು ಇದು ಕಾನಪುರದಿಂದ 14 ಮೈಲಿನ ಅಂತರದಲ್ಲಿದೆ. ಇಂದು ಬೀಠೂರಿನ ರಾಜಮಾರ್ಗಕ್ಕೆ ನಾನಾಸಾಹೇಬ ಪೇಶ್ವೆ ಮಾರ್ಗವೆಂದು ಹೆಸರಿಡಲಾಗಿದೆ. ಬ್ರಹ್ಮಾವರ್ತ ಎಂಬ ಹೆಸರಿನಲ್ಲಿ ರೈಲ್ವೆ ನಿಲ್ದಾಣವಿದೆ. 1885ರಲ್ಲಿ ತಾತ್ಯಾಟೋಪಿಯ ವಂಶಜನಾಗಿದ್ದ ಸುಬೇದಾರ ಪುರುಷೋತ್ತಮ ಟೋಪಿ ಎಂಬಾತನು ಕಂಪನಿ ಸರಕಾರಕ್ಕೆ ಎಂಬತ್ತು ಸಾವಿರ ರೂಪಾಯಿಗಳನ್ನು ತುಂಬಿ ಕಾನಪುರದಿಂದ ಬೀಠೂರು ಅಥವಾ ಬ್ರಹ್ಮಾವರ್ತದವರೆಗೆ ರೈಲು ಮಾರ್ಗವನ್ನು ವಶಪಡಿಸಿಕೊಂಡನು. ಇದರಿಂದಾಗಿ ಈ ರೈಲಿಗೆ ಅಲ್ಲಿಯ ಗ್ರಾಮಾಂತರ ನಿವಾಸಿಗಳು ಸುಬೇದಾರ ತಾತ್ಯಾನ ರೈಲು ಎಂದೇ ಸಂಬೋಧಿಸತೊಡಗಿದರು. ಅಂದಿನ ಕಾಲದಲ್ಲಿ ಸುಬೇದಾರ ತಾತ್ಯಾ ಈತನಿಗೆ ಬಾಂಬೆ ಬರೋಡಾ ಹಾಗೂ ಸೆಂಟ್ರಲ್ ರೈಲ್ವೆ ಹೀಗೆ ಯಾವ ರೈಲಿನಲ್ಲಿ ಪ್ರಯಾಣ ಮಾಡಿದರೂ ಸಹ ಆತನಿಂದ ಶುಲ್ಕವನ್ನು ತೆಗೆದುಕೊಳ್ಳದಂತೆ ಅಧಿಕಾರಿಗಳು ಸುತ್ತೋಲೆಯನ್ನು ಹೊರಡಿಸಿದ್ದರು.

ಬೀಠೂರಿನ ಕ್ಷೇತ್ರ ವ್ಯಾಪ್ತಿಯು 1140 ಎಕರೆಯಷ್ಟಿತ್ತು. ಈ ಭಾಗದಲ್ಲಿ ನಯಾಗಂಜ್ ಬೀಠೂರ ಖುರ್ದ, ಆರ್.ಸಿ. ಲಷ್ಕರ್ ಎಂಬ ಭಾಗಗಳಿದ್ದವು. ಕೊನೆಯ ಬಾಜೀರಾಯನಿಗೆ ಆರ್.ಸಿ.ಲಷ್ಕರದಲ್ಲಿ ತನ್ನ ಸ್ವಂತ ಸೇನೆಯನ್ನಿರಿಸಿಕೊಳ್ಳಲು ಅಪ್ಪಣೆಯನ್ನೀಯಲಾಗಿತ್ತು. 1140 ಎಕರೆ ಪ್ರದೇಶದಿಂದ ಕಂಪನಿ ಸರಕಾರವು ಯಾವುದೇ ಕಂದಾಯವನ್ನು ವಸೂಲಿ ಮಾಡುತ್ತಿರಲಿಲ್ಲ. ಬಾಜೀರಾಯನ ಮರಣಾನಂತರವೂ ಸಹ ಈ ಪದ್ಧತಿಯು ಮುಂದುವರೆದಿತ್ತು. ಅದರಲ್ಲಿ ಬೀಠೂರು ಗ್ರಾಮದ ವಿಸ್ತಾರವು 108 ಎಕರೆಯಷ್ಟು ಎಂದು ಗುರುತಿಸಲಾಗಿತ್ತು. ಇ.ಸ. 1861ರಲ್ಲಿ ಈ ಭಾಗದಲ್ಲಿ ಮೊದಲು ಬಾರಿಗೆ ಚೌಕೀಕಾಯದಾ ಅನಂತರ 1892ರಲ್ಲಿ ಗ್ರಾಮಾಂತರ ಭಾಗದಲ್ಲಿಯ ಸೈನಿಕರ ಕಾನೂನು, 1861ರಲ್ಲಿ ಪೋಲೀಸ್ ಕಾನೂನಿಗೆ ಸೇರಿದ 364 ವಿಧಿನಿಯಮವನ್ನು ಆಚರಣೆಗೆ ತರಲಾಯಿತು. ಇತ್ತೀಚೆಗೆ ಗ್ರಾಮಾಭಿವೃದ್ಧಿ ಕಮಿಟಿಯೂ ಸಹ ರಚನೆಗೊಂಡಿದೆ. ಸುಬೇದಾರನ ಕುಟುಂಬದವರೇ ಆ ಕಮಿಟಿಯ ಅಧ್ಯಕ್ಷರಾಗಿದ್ದಾರೆ. ಇಂದಿನ ಭಾರತದ ಗ್ರಾಮಗಳ ಪರಿಸ್ಥಿತಿಯಿಂದ ಬೀಠೂರಿನಿಂದಲೂ ಜನರು ಪಟ್ಟಣಗಳಿಗೆ ವಲಸೆ ಹೋಗಿದ್ದಾರೆ. ಬಂಡಾಯಕ್ಕಿಂತಲೂ ಪೂರ್ವದಲ್ಲಿ, ಅಂದರೆ 1853ರಲ್ಲಿ ಇಲ್ಲಿಯ ಜನವಸತಿಯು 13580 ರಷ್ಟಿತ್ತು. ಇಂದು ಇಲ್ಲಿ ವಾಸಿಸುವವರಲ್ಲಿ ಹೆಚ್ಚಾಗಿ ಗಂಗಾಪುತ್ರರು, ಬ್ರಹ್ಮಾವರ್ತದ ತೀರ್ಥಸ್ನಾನಕ್ಕೆಂದು ಬರುವ ಯಾತ್ರಿಕರನ್ನು ತಮ್ಮ ಮನೆಯಲ್ಲಿರಿಸಿಕೊಂಡು ಅವರಿಂದ ತೀರ್ಥವಿಧಿಗಳನ್ನು ಮಾಡಿಸಿ ಅದರಿಂದ ಬಂದ ಅದಾಯದಲ್ಲಿಯೇ ಜೀವಿಸುವವರಾಗಿರುವರು. ಬೀಠೂರಿನಲ್ಲಿ ವರುಷಕ್ಕೆ ಮೂರು ಸಲ ಜಾತ್ರೆಗಳಾಗುತ್ತವೆ. ಅದರಲ್ಲೂ ಕಾರ್ತಿಕ ಮಾಸದ ಗಂಗಾ ಸ್ನಾನವು ಮಾತ್ರ ಬಹು ವಿಶೇಷವಾದುದು. ಪೇಶ್ವೆಯವರ ಕಾಲಾವಧಿಯಲ್ಲಿ ಕಾರ್ತಿಕ ಮಾಸದ ಸ್ನಾನಕ್ಕಾಗಿ ಒಂದು ಲಕ್ಷ ಜನ ಬಂದು ಹೋಗುತ್ತಿದ್ದರು. ಇದಾದ ನಂತರ ಪುಷ್ಯಮಾಸದಲ್ಲಿ ಶುದ್ಧ ಏಕಾದಶಿಯ ದಿನದವರೆಗೆ ಬಹು ದೊಡ್ಡ ಜಾತ್ರೆಯು ನಡೆಯುವದು. ಮೂರನೆಯ ಜಾತ್ರೆಯು ಜೇಷ್ಠ ಶುದ್ಧ ದಶಮಿಯ ದಿನದಿಂದ ದಶಹರದವರೆಗೆ ಸಾಗುವದು.

ಬಾಜೀರಾವ್ ಪೇಶ್ವೆ (ಕೊನೆಯ ಅಥವಾ ಎರಡನೇ ಬಾಜೀರಾವ್) ಬ್ರಿಗೇಡಿಯರ್ ಜನರಲ್ ಮಾಲಕಂ ನೊಂದಿಗೆ ನಡೆದ ಯುದ್ಧದಲ್ಲಿ ಸಂಪೂರ್ಣ ಸೋತು ಹೋದ ನಂತರ ಆತನು ತನ್ನ ಕುಟುಂಬ ಪರಿವಾರದವರು ಹಾಗೂ ತನ್ನ ಆಶ್ರಿತ ಸೇವಕರೊಂದಿಗೆ ಜನರಲ್ ಮಾಲಕಂ ಈತನ ಸೇನಾಛಾವಣಿಯಲ್ಲಿ ಹಾಜರಾದನು. ಆಗ ಆತನ ಅಪೇಕ್ಷೆಯ ಮೇರೆಗೆ ಮಹಾರಾಷ್ಟ್ರದ ಭೂಭಾಗದ ವಿನಃ ಆತನು ಎಲ್ಲಿರಲು ಅಪೇಕ್ಷಿಸುವನೋ ಅದಕ್ಕೆ ತಕ್ಕಂತೆ ಎಲ್ಲ ವ್ಯವಸ್ಥೆ ಮಾಡಲು ಗವರ್ನರ್ ಜನರಲ್‌ರಿಂದ ಆಜ್ಞೆ ಮಾಡಲ್ಪಟ್ಟಿತು. ಮೊದಲು ವಾರಣಾಸಿ (ಕಾಶಿ) ಯಲ್ಲಿರುವ ವಿಚಾರ ಮಾಡಿದರು. ಅದಕ್ಕೆ ಬ್ರಿಟೀಷರು ಒಪ್ಪಲಿಲ್ಲ. ಕೊನೆಗೊಮ್ಮೆ ಬೀಠೂರ ಅಥವಾ ಬ್ರಹ್ಮಾವರ್ತದಲ್ಲಿಡುವದೇ ವಿಹಿತವೆಂದು ನಿರ್ಧರಿಸಲಾಯಿತು. ಮುಂದೆ 1857ರ ಬಂಡಾಯದ ಕಾಲದಲ್ಲಿ ಬೀಠೂರ ಅತ್ಯಂತ ಮಹತ್ವದ ಪಾತ್ರವನ್ನು ವಹಿಸಿತು. ನಾನಾಸಾಹೇಬ, ತಾತ್ಯಾಟೋಪಿ, ರಾವ್‌ಸಾಹೇಬ ಇವರೆಲ್ಲರೂ ಬೀಠೂರಿನವರಾಗಿದ್ದು, ಈ ಮೂವರೂ ಸೇರಿಕೊಂಡು ಬಂಡಾಯದ ಮೊದಲು ಭಾಗದಲ್ಲಿ ಬ್ರಿಟೀಷರನ್ನು ಸೋಲಿಸಿದರು.

ಆಂಗ್ಲರ ಪರಾಭವದ ನಂತರ ನಾನಾಸಾಹೇಬ ಪೇಶ್ವೆ ಪದವನ್ನಲಂಕರಿಸಿದನು. ಬೀಠೂರಿನ ಮೇಲೆ ಆಂಗ್ಲ ಸೇನೆಯು ಅನೇಕ ಸಲ ದಾಳಿ ಮಾಡಿತು. ಸಮಗ್ರ ಬೀಠೂರನ್ನೇ ಅದು ನಾಶ ಮಾಡಿತು. ಪೇಶ್ವೆಯ ವಾಸದ ಮನೆಯನ್ನು ನೆಲಸಮವಾಗುವಂತೆ ನೋಡಿಕೊಂಡಿತು. ಬಂಡಾಯದ ಕಾವು ಆರಿದ ನಂತರ ಇಲ್ಲಿಯ ನಾಗರೀಕರು ಗಂಗಾಸ್ನಾನಕ್ಕಾಗಿ ಬರುವ ಯಾತ್ರಿಕರಿಗಾಗಿ ಅನೇಕ ಧರ್ಮಛತ್ರಗಳನ್ನು ನಿರ್ಮಾಣ ಮಾಡಿದರು. ಕಾನಪುರ, ಉದ್ಯೋಗಪತಿ ಹಾಗೂ ರಾಜಕಾರಣಿಗಳೆನಿಸಿದ ಶ್ರೀ ಶಿವನಾರಾಯಣ ತಂಡನ್ ಎಂಬುವವರು ಒಳ್ಳೇ ಆಶ್ರಮವನ್ನು ನಿರ್ಮಾಣ ಮಾಡಿದರು. ಇದೇ ಬೀಠೂರಿನಲ್ಲಿ ಬಾಜೀರಾಯನ ಪತ್ನಿಸರಸ್ವತಿಯ

ದೇಹಾಂತವಾಯಿತು. ಗಂಗಾನದಿಯ ದಂಡೆಯ ಮೇಲೆ ಆ ಸಾಧ್ವಿಯ ಹೆಸರಿನಲ್ಲಿ ಶಿವದೇವಾಲಯವು ನಿರ್ಮಾಣವಾಗಿದ್ದು ಇಂದಿಗೂ ಅದನ್ನು ನೋಡಬಹುದು. ಅಲ್ಲಿಯ ದೇವನನ್ನು ಸರಸ್ವತೇಶ್ವರ ಎಂದು ಕರೆಯುವುದುಂಟು. ಈ ದೇವ ಮಂದಿರದ ಮುಂಭಾಗದಲ್ಲಿಯ ಸ್ನಾನಘಾಟನ್ನು ಪೇಶ್ವೆ ಕಾಲದಲ್ಲಿ ಕಟ್ಟಿಸಿದ್ದು ಇಂದಿಗೂ ಆ ಸ್ನಾನಘಾಟವು ಸುಸ್ಥಿತಿಯಲ್ಲಿದೆ. ಈ ಸ್ನಾನಘಾಟನ್ನೂ ಸಹ ನಾಶ ಮಾಡಲು ಯತ್ನಿಸಿದಾಗ ಲಖನೌ ನಗರದ ನಿವಾಸಿಯಾಗಿದ್ದ ಮುಸಲ್ಮಾನ ಸರದಾರನ ಉದಾರತನದಿಂದಾಗಿ ಅದು ಸುರಕ್ಷಿತವಾಗಿ ಉಳಿಯುವಂತಾಯಿತೆಂದು ಬೀಠೂರಿನ ಇತಿಹಾಸವು ತಿಳಿಸುವದು. ಸ್ವಾತಂತ್ರ್ಯಾನಂತರ ಬೀಠೂರಿನಲ್ಲಿದ್ದ ರಾಜವಾಡೆಯ ಪರಿಸರವನ್ನೆಲ್ಲ ಉದ್ಯಾನವನವನ್ನಾಗಿ ಮಾಡಿ ಮಧ್ಯಭಾಗದಲ್ಲಿ ನಾನಾಸಾಹೇಬ ಪೇಶ್ವೆಯ ಪ್ರತಿಮೆಯನ್ನು ಸ್ಥಾಪಿಸಲಾಗಿದೆ. ಬೀಠೂರು ಭಾರತ ಸ್ವಾತಂತ್ರ್ಯ ಇತಿಹಾಸವನ್ನಭ್ಯಾಸ ಮಾಡುವವರಿಗೆ ಇಂದಿಗೂ ಮಹಾ ಪವಿತ್ರ ಸ್ಥಾನವೆಂದೆನಿಸಿಕೊಂಡಿದೆ.

## ಪೇಶ್ವೆ ಪದವಿಯನ್ನು ಕಳೆದ ರಾಘೋಬಾನ ಸಂತತಿ



# ಗರಳಪುರಿ ( ನಂಜನಗೂಡು )

ಪ್ರಕೃತಿಯಲ್ಲಿ ಅಡಗಿರುವ ಅದ್ಭುತವಾದ ಶಕ್ತಿಗಳ ಚಮತ್ಕಾರಗಳನ್ನು ಕಂಡು ಬೆರಗಾದ ಮಾನವನಲ್ಲಿ ಸೃಷ್ಟಿಕರ್ತನಾದ ಪರಮೇಶ್ವರನು ನಾನಾ ರೂಪದಲ್ಲಿ ತನ್ನ ಈ ಕಾರ್ಯಕ್ರಮಗಳನ್ನು ನಿರ್ವಹಿಸುತ್ತ ಬಂದಿದ್ದಾನೆ ಎಂಬ ನಂಬಿಕೆ ಆಳವಾಗಿ ಬೇರೂರಿದೆ. ಪ್ರಕೃತಿಯಲ್ಲಡಕವಾದ ಪಂಚಮಹಾಭೂತಗಳಿಂದ ಜೀವಲೋಕದ ಸೃಷ್ಟಿಯಾಯಿತೆಂಬ ಮಾತಿನಲ್ಲಿ ಆತನು ದೃಢ ವಿಶ್ವಾಸವನ್ನು ಹೊಂದಿದ್ದಾನೆ. ಸೃಷ್ಟಿ, ಸ್ಥಿತಿ, ಲಯಗಳಿಗೆಲ್ಲ ಬ್ರಹ್ಮ ವಿಷ್ಣು, ಮಹೇಶ್ವರರೇ ಕಾರಣರೆಂಬ ಬಲವಾದ ನಂಬಿಕೆಯುಳ್ಳವನಾಗಿದ್ದಾನೆ. ಜೀವಲೋಕದ ಆಧಾರವೆನಿಸಿದ ಜಲವು ವಿಷ್ಣುವಿನ ಪಾದದಿಂದ ಉದ್ಭವಿಸಿ ಮುಂದೆ ಹರಿದ ಆ ಜಲವನ್ನು ಕೈಲಾಸಾಧಿಪತಿಯಾದ ಮಹೇಶ್ವರನು ತನ್ನ ಜಡೆಯಲ್ಲಿ ಧಾರಣ ಮಾಡಿದನೆಂದೂ ಆದುದರಿಂದಲೇ ಆತನನ್ನು ಗಂಗಾಧರ ಧವಳಗಿರೀಶ ಎಂದು ಕರೆಯುವಂತಾಯಿತೆಂದೂ ವರ್ಣಿಸಿದ್ದಾನೆ. ಈ ಮಹಾನುಭಾವನಿಗೆ ಮನಸೋತವಳು ನಗಾಧಿರಾಜನ ಮಗಳಾದ ಪಾರ್ವತಿದೇವಿ. ಇವರಿಬ್ಬರನ್ನೂ ರಾಷ್ಟ್ರಕವಿ ಎಂದೆನಿಸಿಕೊಳ್ಳುವ ಕಾಲಿದಾಸನು "ಪಾರ್ವತೀ ಪರಮೇಶ್ವರೌ" ಜಗತ್ತಿಗೆ ತಂದೆ ತಾಯಿಗಳಾದ ಸತಿಪತಿಗಳು ಎಂದು ಬಾಯ್ತುಂಬ ಹೊಗಳಿದ್ದಾನೆ.

ಭಾರತ ಎಂಬ ಶಬ್ದವೇ ಚೇತೋಹಾರಿ. ಇಲ್ಲಿರುವ ಪರ್ವತಗಳು, ನದಿಗಳು, ಪುಣ್ಯಕ್ಷೇತ್ರಗಳು ನಮ್ಮ ರಾಷ್ಟ್ರದ ಸಾಂಸ್ಕೃತಿಕ ವೈಭವವನ್ನು ಎತ್ತಿ ತೋರಿಸುವ ಪ್ರತೀಕಗಳು. ಇತರೆಡೆ ಇತಿಹಾಸವು ಕಣ್‌ಬಿಡುವ ಮೊದಲೇ ನಮ್ಮ ನೆಲದಲ್ಲಿ ರಾಷ್ಟ್ರ ಜೀವನವು ನೆಲೆಗೊಂಡಿತ್ತು. ಜಗತ್ತಿನಲ್ಲಿ ನಾಗರಿಕತೆ,

ಸಭ್ಯತೆಯೊಂದಿಗೆ ರಾಷ್ಟ್ರಜೀವನದ ಪರಿಕಲ್ಪನೆಯನ್ನು ಸಾರಿಹೇಳುವ ಋಗ್ವೇದವು ಇಲ್ಲಿಯೇ ಜನ್ಮತಾಳಿತು. ಜನ್ಮ ಕೊಟ್ಟ ಭೂಮಿಯನ್ನು "ಹೇ ಮಾತಾ ನೀನು ಸಮುದ್ರವಾಸಿನಿ. ಪರ್ವತಗಳೇ ನಿನ್ನ ಸ್ಥನಮಂಡಲಗಳು. ನೀನು ವಿಷ್ಣುಪತ್ನಿ ನಡೆದಾಡುವಾಗ ಪಾದಸ್ಪರ್ಶ ಮಾಡುತ್ತಿರುವ ನಮ್ಮನ್ನು ಕ್ಷಮಿಸು" ಎಂದು ಭೂಮಾತೆಯನ್ನು ಪ್ರಾರ್ಥಿಸುವ ಪರಿಕಲ್ಪನೆ ಆರಂಭವಾದುದು ಈ ಭಾರತದ ನೆಲದಲ್ಲಿಯೇ.

ನಮ್ಮ ರಾಷ್ಟ್ರದಲ್ಲಿ ಸೌರಾಷ್ಟ್ರದಲ್ಲಿ ಸೋಮನಾಥನಾದರೆ, ಶ್ರೀಶೈಲದಲ್ಲಿ ಮಲ್ಲಿಕಾರ್ಜುನ, ಉಜ್ಜಯಿನಿಯಲ್ಲಿ ಮಹಾಬಲೇಶ್ವರ, ನರ್ಮದಾ ತೀರದಲ್ಲಿ ಓಂಕಾರೇಶ್ವರ, ಹಿಮವತ್ಪರ್ವತದಲ್ಲಿ ಕೇದಾರನಾಥೇಶ್ವರ, ಡಾಕಿನಿಯಲ್ಲಿ ಭೀಮಾಶಂಕರ, ಕಾಶಿಯಲ್ಲಿ ವಿಶ್ವೇಶ್ವರ ಗೋದಾವರಿಯ ಉಗಮ ಸ್ಥಾನದಲ್ಲಿ ತ್ರಂಬಕೇಶ್ವರ, ಪರಳಿಯಲ್ಲಿ ವೈಜನಾಥ, ದಾರುಕಾವನದಲ್ಲಿ ನಾಗೇಶ್ವರ, ದಕ್ಷಿಣದ ತುದಿಭಾಗದಲ್ಲಿರುವ ರಾಮೇಶ್ವರ, ಕರ್ನಾಟಕದಲ್ಲಿ ಕಪಿಲಾ, ಕೌಂಡಿಣ್ಯ ತೀರದಲ್ಲಿರುವ ನಂಜುಂಡೇಶ್ವರ ಹೀಗೆ ಅನೇಕ ತಾಣಗಳನ್ನು ಜ್ಯೋತಿರ್ಲಿಂಗಗಳೆಂಬ ಭಾವನೆಯಿಂದ ಪೂಜೆಗೈದು ಬಹುಕಾಲ, ಅಲ್ಲಿದ್ದು ತಪಗೈದು ಸಿದ್ಧಿಯನ್ನು ಪಡೆದುಕೊಂಡ ಋಷಿಮುನಿಗಳ ಜೀವನ ಚರಿತ್ರೆಯೂ ಸಹ ನಮಗೆಲ್ಲ ಬಹು ಚೇತೋಹಾರಿಯಾದುದು.

ಗಂಗಾ, ಯಮುನಾ, ಸಿಂಧು, ಸರಸ್ವತಿ, ಬ್ರಹ್ಮಪುತ್ರ, ನರ್ಮದಾ, ತಾಮ್ರಪರ್ಣಿ, ತಪತಿ, ಗಂಡಕಿ, ಕೋಶಿ, ಕಾಳಿ, ಗೋಗ್ರ, ಭಗವತಿ, ವಿಷ್ಣುಮತಿ, ನಂದಿನಿ, ನಳಿನಿ, ಮಾಲತಿ, ಮಲಾಪಹಾರಿ, ಕೃಷ್ಣಾ, ಕಾವೇರಿ, ಕಪಿಲಾ, ಕೌಂಡಿನ್ಯ ನೇತ್ರಾವತಿ, ಶರಾವತಿ-ಇವೇ ಮೊದಲಾದ ಪ್ರವಾಹಗಳೆಲ್ಲ ತಾಪಸಿಗರ ತಾಣವಾಗಿ ಆ ಮುನಿಗಳಿಗೆ ಆಶ್ರಯಸ್ಥಾನವಾಗಿ ಪರಿಣಮಿಸಿದವು.

ಭಾರತೀಯರು ಯಾವ ಜಲವನ್ನೇ ಕಾಣಲಿ ಅದನ್ನು "ಗಂಗಾ" ಎಂದೇ ಭಾವಿಸತೊಡಗಿದರು. ಸುಮಂಗಲೆಯರೆಲ್ಲ ತಾವು ಕಂಡ ಪ್ರವಾಹವನ್ನೋ, ಪುಷ್ಕರಿಣಿಯನ್ನೋ ಅಥವಾ ಕೆರೆಯನ್ನೋ ಪೂಜಿಸುವಾಗಲು ಸಹ ಅದನ್ನು

ಗಂಗಾಪೂಜೆ ಎಂಬ ಭಾವನೆಯಿಂದಲೇ ಆ ನಿರ್ಮಲ ಜಲವನ್ನು ಪೂಜಿಸ ತೊಡಗಿದರು. ಅಷ್ಟೇಕೆ ಮನೆಯಲ್ಲಿ ಸ್ನಾನ ಮಾಡುವಾಗ ಬಳಸುವ ಪಾತ್ರೆಯನ್ನೂ ಗಂಗಾಳವೆಂದೇ ಕರೆಯತೊಡಗಿದರು. ಅವರ ಈ ವಿಶಾಲಭಾವನೆಯು ನಿಸರ್ಗದೊಂದಿಗೆ ಅವರು ಹೊಂದಿದ ಸಂಬಂಧವು ಹೇಗಿತ್ತೆಂಬುದನ್ನು ಎತ್ತಿ ತೋರಿಸಿದರು.

ಸ್ನಾನದಿಂದ ದೇಹ ಮನಗಳ ಶುದ್ಧಿಯೇ ಹೊರತು ಕೇವಲ ಬರೀ ಚಂದನಾದಿ ಲೇಪನಗಳಿಂದಲ್ಲ ಎಂಬ ಮಾತನ್ನು ನಮಗೆ ತಿಳಿಸಿ ಹೇಳಿದರು. ಬಿಸಿಲಿನಲ್ಲಿ ಬಾಯಾರಿ ಬಂದವನು ತನಗೆ ನೀರು ಕೊಡಿ ಎಂದು ಎಂದೂ, ಯಾರನ್ನೂ ಕೇಳುತ್ತಿರಲಿಲ್ಲ. ಗಂಗಾ ಜಲವನ್ನು ಕೊಡಿ ಎಂದು ಕೇಳುವ ಸಂಪ್ರದಾಯವೇ ಇಂದಿಗೂ ಗ್ರಾಮಾಂತರ ಜೀವನದಲ್ಲಿ ಸಾಗಿಬಂದುದನ್ನು ನಾವು ಕಾಣಬಹುದು. ಈ ಜಲ ಹಾಗೂ ಈ ನೆಲದಲ್ಲಿ ಮಾನವನ ಮನವನ್ನು ತಿಳಿಗೊಳಿಸುವ ದಿವ್ಯಶಕ್ತಿ ಅಡಗಿದೆ ಎಂಬುದನ್ನು ತಮ್ಮ ಮುಂದಿನ ಸಂತಾನರಿಗೆಲ್ಲ ನಮ್ಮ ಪೂರ್ವಜರು ತಿಳಿಸಿಕೊಟ್ಟರು. ಸ್ವರ್ಗಲೋಕವೇ ಭಾರತಭೂಮಿಯನ್ನು ಒಂದು ತಪೋವನ ಎಂದು ಭಾವಿಸಿ ಅಲ್ಲಿಯ ಸ್ವರ್ಗಾಧಿಪತಿಗಳು ಈ ಭೂದೇವಿಗೆ ಆರತಿಯನ್ನು ಬೆಳಗುವರು ಎಂದು ಕವಿಯ ಕಲ್ಪನೆ ಅಸಾಮಾನ್ಯವಾದುದು.

ಎರಡು ಹರಿವ ಪ್ರವಾಹಗಳು ಒಂದುಗೂಡುವ ಸಂಗಮ ಸ್ಥಳಗಳಲ್ಲಿ ಹರಿಹರರಿಬ್ಬರನ್ನೂ ಇಟ್ಟು ಪೂಜಿಸುವ ಸಂಪ್ರದಾಯಗಳನ್ನು ಬೆಳೆಸಿಕೊಂಡು ಬಂದರು. ಆ ದೇವತೆಗಳ ನಿವಾಸವೆಂದು ಭವ್ಯವಾದ ಅಷ್ಟೇ ಕಲಾತ್ಮಕವಾದ ದೇವಮಂದಿರಗಳನ್ನೂ ಸಹ ನಿರ್ಮಾಣ ಮಾಡಿದರು. ಲೋಕ ಕಲ್ಯಾಣಾರ್ಥವಾಗಿ ಯಜ್ಞಯಾಗಾದಿ ಕರ್ಮಗಳನ್ನಾಚರಿಸತೊಡಗಿದರು. ಪ್ರಶಾಂತವಾದ ವಾತಾವರಣದಲ್ಲಿ ಜ್ಞಾನದ ಭಂಡಾರಗಳೆನಿಸಿದ ವೇದೋಪನಿಷತ್ತುಗಳನ್ನೂ ಸಾಕ್ಷಾತ್ಕರಿಸಿಕೊಂಡರು. ನಮ್ಮ ಪೂರ್ವಜರಿಗೆ ಪರಿಸರದ ನೈರ್ಮಲ್ಯವೇ ಮಹಾಮಂತ್ರವಾಗಿ ಪರಿಣಮಿಸಿತು-ಅವರು ತಮ್ಮೊಂದಿಗೆ ಪಶುಪಕ್ಷಿಗಳೂ ಸಹ ಸಮಾನ ಜೀವಿಗಳಾಗಿ ಬಾಳುವಂತೆ ನೋಡಿಕೊಂಡರು. ಆ ಹಿರಿಯರು ತಾವು ಕಂಡುದೆಲ್ಲ "ಈಶಾವಾಸ್ಯಮಿದಂ

ಸರ್ವಂ'' ಎಂಬ ವಿಶಾಲ ಭಾವನೆಯು ಅವರಲ್ಲಿ ಮೂಡುವಂತೆ ನೋಡಿಕೊಂಡರು.

ಅನೇಕ ಪುಣ್ಯ ಪ್ರವಾಹಗಳೆಲ್ಲ ಉತ್ತರ ಭಾರತದಲ್ಲಿ ಹರಿಯುವುದನ್ನು ಕಂಡು ಋಷಿ ಮುನಿಗಳು ಆ ಜಲ ಪ್ರವಾಹವನ್ನು ತಮ್ಮ ಕಮಂಡಲುಗಳಲ್ಲಿ ತುಂಬಿಕೊಂಡು ಪ್ರಶಾಂತಮಯವಾದ ದಕ್ಷಿಣ ಭಾರತದತ್ತ ವಲಸೆ ಬಂದರು. ಈ ನೆಲದಲ್ಲಿ ತಮ್ಮ ಸಿದ್ಧಾಶ್ರಮಗಳನ್ನು ಬೆಳೆಸಿಕೊಂಡರು. ಮೈಸೂರಿನ ಸಮೀಪದಲ್ಲಿರುವ ಕಪಿಲಾ ಕೌಂಡಿಣ್ಯ ತೀರದಲ್ಲಿರುವ ಗರಳಪುರಿ ಅಥವಾ ನಂಜನಗೂಡು ಅಂಥ ದಿವ್ಯವಾದಸಿದ್ಧಿಯ ತಾಣಗಳಲ್ಲಿ ಹಿರಿದಾದ ಹಾಗೂ ಶ್ರೇಷ್ಠವಾದ ಪುಣ್ಯಕ್ಷೇತ್ರವೆಂದು ಜಗದ್ವಿಖ್ಯಾತಿಯನ್ನು ಪಡೆದುಕೊಳ್ಳುವಂತೆ ಮಾಡಿದರು.

ಜೀವ ಜಗತ್ತಿನಲ್ಲಿ ಕಾಲಿರಿಸಿದ ಪ್ರತಿಯೊಂದು ಪ್ರಾಣಿಗೂ ಜನನ ಮರಣಾದಿಗಳ ಬಂಧನವು ತಪ್ಪಿದುದಲ್ಲ. ಅದರಲ್ಲಿಯೂ ಮಾನವನಂತೂ ತನಗೆ ಸುಖ ಮಾತ್ರ ಬೇಕೆಂದು ದುಃಖವು ಬೇಡ ಎಂದು ಹಂಬಲಿಸುವ ಸ್ವಭಾವದವನು. ಆತನ ಅಂತರಾತ್ಮದಲ್ಲಿ ಹುದುಗಿರುವ ಅರಿಷಡ್ವರ್ಗಗಳೆಂಬ ನಂಜು ತುಂಬಿ ಹೋಗಿದೆ ಎಂಬ ಮಾತಿನ ಅರಿವಿಲ್ಲದವನು. ಈ ನಂಜಿನಿಂದ ಪಾರಾಗಬೇಕಾದಲ್ಲಿ ಅಥವಾ ಈ ವಿಷಭಾದೆಯಿಂದ ತಪ್ಪಿಸಿಕೊಳ್ಳಬೇಕಾದಲ್ಲಿ ಲೋಕಪಾಲನಾದ ಜಗದ್ರಕ್ಷಕನಾದ ನೀಲಕಂಠನೆಂದೆನಿಸಿಕೊಂಡಿರುವ ನಂಜುಂಡೇಶ್ವರನನ್ನು ಮೊರೆಹೋಗುವದೊಂದೇ ಮಾರ್ಗವೆನಿಸಿರುವದು. ಕ್ಷೇತ್ರಪಾಲನಾದ ಮಹಾದೇವನ ಸನ್ನಿಧಾನದಲ್ಲಿ ಹರಿವ ಪುಣ್ಯಪ್ರವಾಹದಲ್ಲಿ ಮಿಂದು ಮೈಮನಗಳಿಗಂಟಿದ ಕೊಳೆಯನ್ನು ಕಳಚಿಕೊಂಡು ನಂಜುಂಡೇಶ್ವರನೇ ನಿನಗೆ ಶರಣು ಎಂದು ಕಾಯಾ ವಾಚಾ ಮನಸಾ ಯಾರು ಆತನಿಗೆ ಮೊರೆಹೋಗುವರೋ ಅಂಥಹವರಿಗೆ, ಖಂಡಿತವಾಗಿಯೂ ಈ ಜೀವನದಲ್ಲಿ ಅವರಿಗೆ ಮನಃಶಾಂತಿಯೂ ಲಭಿಸುವುದು. ಶಾಶ್ವತ ಸುಖವು ಪ್ರಾಪ್ತವಾಗುವುದು.

ಒಂದು ಕಾಲದಲ್ಲಿ ಗರಳಪುರಿ ಎಂದು ಹೆಸರು ಪಡೆದ ಈ ಕ್ಷೇತ್ರದ

ಮಹಿಮೆಯನ್ನು ಸೂತರು ಶೌನಕಾದಿ ಮುನಿಗಳಿಗೆ ಸವಿಸ್ತಾರವಾಗಿ ಪುರಾಣರೂಪದಲ್ಲಿ ಅಥವಾ ಕಥಾರೂಪದಲ್ಲಿ ತಿಳಿಹೇಳಿದರು. ಸ್ಕಂದಪುರಾಣದಲ್ಲಿರುವ ಸಂಸ್ಕೃತ ಸಾಹಿತ್ಯವೇ ಈ ಮಾತಿಗೆ ಆಧಾರವೆನಿಸುವುದು. ಕಪಿಲಾ ಕೌಂಡಿಣ್ಯ ನದಿಗಳು ಈ ಧರೆಯಲ್ಲಿ ಕಾಣಿಸಿಕೊಳ್ಳಲು ಕಾರಣವೇನು? ಈ ಪವಿತ್ರ ತೀರ್ಥದಲ್ಲಿ ಹಿಂದೆ ಯಾರು ಯಾರು ಮಿಂದು ಪುನೀತರಾದರು? ಕೈಲಾಸಾಧಿಪತಿಯಾದ ಮಹಾದೇವನ ಸಾನ್ನಿಧ್ಯ ಹೊಂದಲು ಈ ಸ್ಥಳದ ಮಹತ್ವವೇನು ಎಂಬುದನ್ನು ತಿಳಿದುಕೊಂಡಲ್ಲಿ ಭಕ್ತರ ಮನೋಭೀಷ್ಟಗಳೆಲ್ಲ ಬಹುಬೇಗನೆ ಪೂರೈಸುವವೆಂಬ ಮಾತನ್ನು ಪ್ರಾಚೀನರು ಪ್ರತಿಜ್ಞಾಪೂರ್ವಕ ಹೇಳಿರುವುದರಿಂದ ಸ್ಕಂದಪುರಾಣಾಂತರ್ಗತ ಗರಳಪುರಿಯ ಸಂಕ್ಷಿಪ್ತ ಚರಿತೆಯನ್ನು ಮೊದಲು ಭಕ್ತರ ಗಮನಕ್ಕೆ ತರುವುದು ವಿಹಿತವೆನಿಸುವುದು.

ಕೈಲಾಸಾಧಿಪತಿಯಾದ ಶಂಕರನೊಂದಿಗೆ ಆತನ ಅರ್ಧಾಂಗಿಯಾದ ಪಾರ್ವತಿ ದೇವಿಯು ಲೋಕ ಕಲ್ಯಾಣಾರ್ಥವಾಗಿ "ನಾಥಾ, ಮಾನವನ ಹೃನ್ಮನಗಳನ್ನಾವರಿಸಿದ ಅರುವೈರಿಗಳಾದ ಕಾಮ, ಕ್ರೋಧ, ಮದ ಮತ್ಸರಾದಿ ವಿಷದ ನಂಜನ್ನು ಪರಿಹರಿಸಿಕೊಳ್ಳುವ ಯಾವುದಾದರೂ ಸ್ಥಳವು ಭೂಲೋಕದಲ್ಲಿದೆಯೇ?" ಎಂದು ಪ್ರಶ್ನೆ ಮಾಡಿದಳು. ಸತಿಪತಿಗಳಲ್ಲಿ ನಡೆದ ಈ ಸಂವಾದವನ್ನೇ "ಗರಳಪುರಿಯ ಮಹಾತ್ಮೆ" ಎಂಬ ಹೆಸರಿನಿಂದ ಸ್ಕಂದಪುರಾಣವೆಂಬ ಭಾಗದಲ್ಲಿ ಕಾಣುವಂತಾಗಿರುವುದು. ಸತಿಯಾದ ಪಾರ್ವತಿದೇವಿಯ ಮನೋವಾಂಛಿತವನ್ನು ಅರಿತ ಧವಲಗಿರೀಶನು ಸಾದ್ಯಂತವಾಗಿ ತನ್ನ ಸತಿಗೆ ವಿವರಗಳನ್ನೀಯುವ ಕಥೆ ಬಹು ಸ್ವಾರಸ್ಯಮಯವಾದುದು.

ನಮ್ಮ ಋಷಿಮುನಿಗಳು ಶಿವನೆಂದರೆ ಒಳ್ಳೆಯವನೆಂದೂ "ಶೇತೇಸ್ಮಿನ್ ಸರ್ವಮಿತಿ ಶಿವಃ" ಎಂಬುದಾಗಿ ಋಗ್ವೇದದಲ್ಲಿ ಹೇಳಿಕೊಂಡಿರುವುದುಂಟು. ಪ್ರಥಮ ಮಂಡಲದಲ್ಲಿ ಶಿವನನ್ನು ಕುರಿತು ಕೆಲವು ಋಕ್ಕುಗಳಿವೆ. ಅದೇ ರೀತಿ ಶತಪಥ ಬ್ರಾಹ್ಮಣ ಹಾಗೂ ಕೃಷ್ಣಯಜುರ್ವೇದದಲ್ಲಿ "ಏಕೋಹಿ

ರುದ್ರೋ ನ ದ್ವಿತಿಯಾಯ'' ಎಂದು ಹೇಳಲಾಗಿದೆ. ಆದುದರಿಂದ ಮಹಾದೇವನ ಮಹಿಮೆ ಬಲು ಅಗಾಧವಾದುದು. ಏಕಾಗ್ರಚಿತ್ತದಿಂದ ಆತನನ್ನು ಆರಾಧಿಸಿದಲ್ಲಿ ಖಂಡಿತವಾಗಿಯೂ ಸುಪ್ರಸನ್ನನಾಗಿ ಆತನು ಫಲವನ್ನೀಯುವುದರಲ್ಲಿ ಯಾವ ಸಂದೇಹವೂ ಇಲ್ಲ ಎಂಬ ನಂಬಿಕೆ ಬಹು ಪ್ರಾಚೀನ ಕಾಲದಿಂದಲೂ ನೆಲೆಯೂರಿ ನಿಂತಿರುವುದು.

ದಕ್ಷಿಣದಲ್ಲಿ ಚೋಳರಾಜರ ಕಾಲದಲ್ಲಿ ಹಾಗೂ ಗಂಗರ ಕಾಲದಲ್ಲಿ ಅನೇಕ, ಶಿವದೇವಾಲಯಗಳು ಬೆಳೆದು ಬಂದವು. ರಾಜರಾಜ ಕುಲೋತ್ತುಂಗ ರಾಜೇಂದ್ರನ ಕಾಲದಲ್ಲಿ (1070 ರಿಂದ 1120) ಕಣ್ಮನಗಳನ್ನು ತಣಿಸುವಂತಹ ದೇವಾಲಯಗಳು ನಿರ್ಮಾಣವಾದುದನ್ನು ನಾವು ಇಂದಿಗೂ ಕಾಣಬಹುದು. ಈ ದೇವಾಲಯಗಳೊಂದಿಗೆ ಹೆಬ್ಬಾಗಿಲಿನಲ್ಲಿ ನಿರ್ಮಿತವಾದ ಗಗನದೆತ್ತರದ ಗೋಪುರಗಳೂ ಸಹ ಭಕ್ತರ ಮನವನ್ನಾಕರ್ಷಿಸಲು ಆ ದೇವನ ಮಹಿಮೆ ಸಾರಲು ಕೈ ಮುಗಿದು ನಿಂತಿರುವುದನ್ನು ನೋಡಿ ಆನಂದಿಸಬಹುದು.

ಲೋಕಮಾತೆ ಎಂದೆನಿಸಿಕೊಳುವ ಪಾರ್ವತೀ ದೇವಿಯು ತನ್ನ ಸಂತಾನರ ಕಲ್ಯಾಣ ನಿಮಿತ್ತದಿಂದ ಮಾಡಿದ ಪ್ರಶ್ನೆಯಿಂದ ಸುಪ್ರೀತನಾದ ಮುಕ್ಕಣ್ಣನು ಸತಿಯ ಮುಖವನ್ನು ನೋಡುತ್ತ ಭೂಲೋಕದ ಮಹತಿಯನ್ನು ಕುರಿತು ವಿವರವನ್ನೀಯತೊಡಗಿದನು.

ಒಂದು ಕಾಲದಲ್ಲಿ ದೇವದಾನವರಿಬ್ಬರೂ ಸೇರಿಕೊಂಡು ಮಂದರಾಚಲ ಪರ್ವತವನ್ನೇ ಕಡೆಗೋಲನ್ನಾಗಿ ಮಾಡಿ ಆದಿಶೇಷನನ್ನು ಅದಕ್ಕೆ ಸುತ್ತುಹಾಕಿ ಒಂದೆಡೆ ದೇವತೆಗಳಾದರೆ ಇನ್ನೊಂದೆಡೆ ದಾನವರು ಹೀಗೆ ವಿಭಾಗ ಮಾಡಿಕೊಂಡು ಸಮುದ್ರ ಮಂಥನ ಕಾರ್ಯದಲ್ಲಿ ನಿರತರಾದರು. ಅವರು ನಡೆಸಿದ ಆ ಮಂಥನದಿಂದಾಗಿ ಅಮೂಲ್ಯವಾದ ಮುತ್ತುರತ್ನಗಳು ಕಾಣುವಂತಾದವು. ಅದೇ ಕಾಲದಲ್ಲಿ ಹಾಲಾಹಲ ವಿಷವೂ ಕಾಣಿಸಿಕೊಂಡಿತು. ಆ ವಿಷದ ಪ್ರಖರತೆಯಿಂದಾಗಿ ಮೂರುಲೋಕಗಳೂ

ತಲ್ಲಣಿಸಿಹೋದವು. ದೇವದಾನವರೆಲ್ಲ ನಡುಗಿಹೋದರು. ಆಗ ನಿನ್ನ ಪತಿಯಾದ ನಾನೇ ಮುಂದಾಗಿ ನಿಂತು ಅಂದು ಆ ವಿಷ ಪ್ರಾಶನ ಮಾಡಿದೆ. ಹಾಗೆ ವಿಷಪಾನ ಮಾಡಿದುದರಿಂದ ನನ್ನ ಕಂಠಕ್ಕೆ ಅದು ಆಭರಣವಾಗಿ ತೋರಿತು. ನಾನು ವಿಷಕಂಠನೆಂದು ಕರೆಸಿಕೊಳ್ಳತೊಡಗಿದೆ. ಇದರಿಂದಾಗಿ ಅರ್ಧಕ್ಕೆ ನಿಂತು ಹೋಗಿದ್ದ ಮಂಥನ ಕಾರ್ಯವು ಪುನಃ ಆರಂಭವಾಯಿತು. ಸ್ವಲ್ಪಸಮಯದ ನಂತರ ಅಮೃತ ಕಲಶವನ್ನು ಧರಿಸಿದ ಧನ್ವಂತರಿಯು ಕಾಣಿಸಿಕೊಂಡನು. ಆಗ ಆ ಅಮೃತವು ನಮಗೆ ಮೀಸಲು ಎಂದು ದೇವದಾನವರಿಬ್ಬರೂ ಕಲಹದಲ್ಲಿ ನಿರತರಾದರು. ಆ ಕೋಲಾಹಲವನ್ನರಿತ ವಿಷ್ಣುವು ಮೋಹಿನಿಯ ರೂಪವನ್ನು ಧರಿಸಿ ಎಲ್ಲರಿಗೂ ಅಮೃತವನ್ನು ಸರಿಯಾಗಿ ಹಂಚುವೆನೆಂದು ಸಮಾಧಾನ ಹೇಳಿದನು. ಆ ಸುಂದರಿಯ ಮೋಹಕ್ಕೊಳಗಾದ ದಾನವರು ಆತನ ಮಾತನ್ನು ಒಪ್ಪಿಕೊಂಡರು. ಮೊದಲು ದೇವತೆಗಳ ಸರದಿಯಲ್ಲಿ ಮೋಹಿನಿಯು ಅಮೃತವನ್ನುಣಿಸತೊಡಗಿದಳು. ಆಗ ಈ ಮೊದಲು ಎಲ್ಲಿ ಹಾಲಾಹಲವಿಷದ ಹನಿಯೊಂದು ಬಿದ್ದಿತ್ತೋ ಅದೇ ಸ್ಥಳದಲ್ಲಿ ಅಮೃತದ ಒಂದು ಹನಿಯೂ ಸಹ ಭೂಮಿಯಲ್ಲಿ ಬಿದ್ದಿತು. ಅದನ್ನು ಕಂಡ ಕೇಶಿ ಎಂಬ ದಾನವನು ಧಾವಿಸಿ ಬಂದು ಅದನ್ನು ಪ್ರಾಶನ ಮಾಡಿದನು. ಮೋಹಿನಿಯ ಕೈಯಿಂದ ಬಿದ್ದ ಅಮೃತದೊಂದಿಗೆ ವಿಷವೂ ಸಹ ಆತನ ದೇಹದಲ್ಲಿ ಸೇರಿಕೊಂಡಿತು. ಸಾಕ್ಷಾತ್ ವಿಷ್ಣುರೂಪಿಯಾದ ಮೋಹಿನಿಯು ಹಸ್ತದಿಂದ ಬಿದ್ದ ಅಮೃತಪ್ರಾಶನದಿಂದ ಆತನು ಭೂಲೋಕದಲ್ಲಿ ಅವತಾರ ಮಾಡಿದನು. ಬ್ರಹ್ಮ ವಿಷ್ಣು ಇವರಿಬ್ಬರನ್ನೂ ಕುರಿತು ಘೋರವಾದ ತಪವನ್ನು ಆಚರಿಸಿದನು. ಆತನ ಮನಸ್ಸಿಗೆ ಮೆಚ್ಚಿ ಅವರಿಬ್ಬರೂ ಆತನಿಗೆ ವರವನ್ನಿತ್ತರು. ಇದರಿಂದಾಗಿ ಆತನ ಮನವನ್ನಾ ವರಿಸಿದ ಅಹಂಕಾರದ ವಿಷಜ್ವಾಲೆಯು ಪ್ರಖರಗೊಳ್ಳುವಂತಾಯಿತು. ಭೂಲೋಕವಾಸಿಗಳಾದ ಋಷಿ ಮುನಿಗಳಿಂದ ಆಚರಿಸಲ್ಪಡುತ್ತಿದ್ದ ಯಜ್ಞಯಾಗಾದಿಗಳಿಗೆಲ್ಲ ಆತನಿಂದ ತೊಂದರೆಯಾಗಲಾರಂಭಿಸಿತು. ಆತನ ಉಪಟಳವನ್ನು ಸಹಿಸಲಾರದೆ ಭೂಸುರರೆಲ್ಲ ಸತ್ಯಲೋಕ ಹಾಗೂ ವೈಕುಂಠಕ್ಕೆ

ಹೋಗಿ ತಮಗೊದಗಿದ ಸಂಕಟವನ್ನೆಲ್ಲ ತೋಡಿಕೊಂಡರು. ಅವರ ಪ್ರಾರ್ಥನೆಯನ್ನು ಮನ್ನಿಸಿದ ಬ್ರಹ್ಮವಿಷ್ಣು ಇಬ್ಬರೂ ಬಂದವರಿಗೆ ಸಮಾಧಾನ ಹೇಳಿ 'ನೀವು ಪುನಃ ಮರಳಿ ಹೋಗಿ ಗರಳಪುರಿಯಲ್ಲಿ ರುದ್ರದೇವನನ್ನು ಕುರಿತು ಹೋಮವನ್ನಾರಂಭಿಸಿರಿ. ಆಗ ಆ ಕೇಶೀ ದೈತ್ಯನು ಅಗ್ನಿಕುಂಡದಲ್ಲಿ ಆಹುತಿಯಾಗುವಂತೆ ಮಾಡುತ್ತಾನೆ. ನಿಮಗೆಲ್ಲ ಆ ದೇವನು ಅನುಗ್ರಹಿಸುತ್ತಾನೆ. ಚಿಂತಿಸಬೇಡಿರಿ. ಮೊದಲು ಯಾಗವನ್ನಾರಂಭಿಸಿರಿ' ಎಂದು ಸಮಾಧಾನ ಹೇಳಿ ಕಳುಹಿಸಿದರು.

ಕಪಿಲಾ ಕೌಂಡಿಣ್ಯ ಪ್ರವಾಹಗಳ ದಂಡೆಯ ಮೇಲೆ ಹೋಮ ಹವನಾದಿ ಕಾರ್ಯಗಳು ಆರಂಭವಾದವು. ಆಗ ಅವುಗಳನ್ನು ಭಂಗಪಡಿಸಲು ಕೇಶೀ ದೈತ್ಯನು ಧಾವಿಸಿ ಬರುತ್ತಿರುವುದನ್ನು ಕಂಡು ತ್ರಿನೇತ್ರನಾದ ನನ್ನಿಂದ ಆ ದೈತ್ಯನ ಸಂಹಾರವಾಯಿತು. ಆಗ ಸಕಲ ದೇವತೆಗಳಿಂದ ಪ್ರಾರ್ಥಿತನಾಗಿ ಇಲ್ಲಿಯೇ ಸ್ಥಿರವಾಗಿ ವಾಸಮಾಡಿಕೊಂಡಿರುವುದಾಗಿ ಅವರಿಗೆಲ್ಲ ಅಭಯವನ್ನಿತ್ತಿರುವೆನು. ಆ ಸ್ಥಳವನ್ನೇ ಮುಂದೆ ಗರಳಪುರಿ ಎಂದು ಕರೆಯ ತೊಡಗಿದರು.''

ಪತಿಯ ಮಾತನ್ನಾಲಿಸುತ್ತಿದ್ದ ಹಿಮರಾಜಸುತೆಯು ''ನಾಥಾ ತಾವು ಕಪಿಲಾ ಹಾಗೂ ಕೌಂಡಿಣ್ಯ ಪ್ರವಾಹಗಳ ವಿಚಾರವನ್ನು ಕುರಿತು ಹೇಳಿದಿರಿ. ನನಗೆ ಆ ಪುಣ್ಯ ಪ್ರವಾಹಗಳು ಹೇಗೆ ಹುಟ್ಟಿಕೊಂಡವು, ಅವುಗಳ ಮಹತ್ವವೇನು ಎಂಬ ವಿಚಾರವನ್ನೂ ತಿಳಿದುಕೊಳ್ಳಬೇಕೆಂಬ ಆಸೆಯಾಗಿದೆ. ದಯಮಾಡಿ ಆ ವಿಚಾರವನ್ನು ತಿಳಿಸಬೇಕಾಗಿ ಕೇಳಿಕೊಳ್ಳುತ್ತೇನೆ'' ಎಂದು ಪ್ರಾರ್ಥಿಸಿಕೊಂಡಳು. ಅದನ್ನಾಲಿಸಿದ ಗಂಗಾಧರಪ್ರಿಯನು ''ದೇವೀ ಇಂದೇಕೊ ನಿನ್ನ ಮನಸ್ಸು ಭೂಲೋಕವಾಸಿಗಳ ಉದ್ಧಾರವನ್ನೇ ಕುರಿತು ಚಿಂತಿಸತೊಡಗಿದೆ. ಎಷ್ಟಾದರೂ ನಿನ್ನದು ತಾಯಿಯ ಹೃದಯ. ಅಂದಮೇಲೆ ತನ್ನ ಸಂತಾನರ ಉದ್ಧಾರವನ್ನು ನೀನಲ್ಲದೆ ಬೇರಿನ್ನಾರು ಚಿಂತಿಸಲು ಸಾಧ್ಯ ಆಗಲಿ. ಆ ಪ್ರವಾಹಗಳು ಹೀಗೆ ಹುಟ್ಟಿಕೊಂಡವೆಂಬ ಕಥೆಯನ್ನೂ ನಿನಗೆ ತಿಳಿಸಿಕೊಡುತ್ತೇನೆ.

"ಮಹಾಮುನಿಗಳಾದ ಕಪಿಲಮಹರ್ಷಿಗಳು ತಪವನ್ನಾಚರಿಸುತ್ತಿದ್ದಾಗ ಸಗರರಾಜನ ಸಂತಾನದಿಂದ ಆ ಮುನಿವರ್ಯರಿಗೆ ಆಗಾಗ ತೊಂದರೆಯಾಗತೊಡಗಿತು. ಇದರಿಂದಾಗಿ ಆ ಮುನಿಗಳು ದಕ್ಷಿಣಕ್ಕೆ ಬಂದು ನೀಲಾಚಲವೆಂಬ ತಾಣದಲ್ಲಿ ಆಶ್ರಮವನ್ನು ಕಟ್ಟಿಕೊಂಡು ತಪೋನಿರತರಾದರು. ಅವರ ತಪಸ್ಸಿಗೆ ಮೆಚ್ಚಿ ನಾನು ಅವರಿಗೆ ದರ್ಶನವನ್ನಿತ್ತಾಗ ಸುಪ್ರೀತರಾದ ಮುನಿಗಳು ವಿವಿಧ ರೀತಿಯಲ್ಲಿ ನನ್ನನ್ನು ಸ್ತೋತ್ರ ಮಾಡಿದರು. ಸುಪ್ರೀತನಾದ ನಾನು 'ಮಹಾಮುನಿಯೇ ನಿನ್ನ ಬ್ರಹ್ಮರಂಧ್ರದಿಂದ ಅಮೃತವು ಧಾರಾಕಾರವಾಗಿ ಹರಿಯುವಂತಾಗಲಿ, ನಿನ್ನ ಸಾಧನೆಯು ತುಳಸಿಯ ವೃಕ್ಷವಾಗಲಿ ಎಂದು ಹೇಳಿ ನಿನ್ನಿಂದ ಹೊರಟ ಆ ಪ್ರವಾಹದಲ್ಲಿ ಮಿಂದು ಯಾರು ನನ್ನ ದರ್ಶನ ಪಡೆಯುತ್ತಾರೆಯೋ ಅವರಿಗೆ ಕೈಲಾಸ ಲೋಕವು ಪ್ರಾಪ್ತವಾಗಲಿ. ಹರಿವ ನೀರನ್ನು ಕಪಿಲಾ ಎಂದೇ ಕರೆಯುವಂತಾಗಲಿ' ಎಂದು ವರವನ್ನು ದಯಪಾಲಿಸಿರುವೆನು. ಅಂದಿನಿಂದ ಕಪಿಲಾ ನದಿಯು ಆ ಭಾಗದಲ್ಲಿ ಪ್ರವಾಹ ರೂಪದಲ್ಲಿ ಹರಿಯುತ್ತ ಮುಂದೆ ತಿರುಮಕೂಡಲು ಎಂಬ ಸ್ಥಳಕ್ಕೆ ಬಂದಾಗ ಅದು ಕಾವೇರಿ ಪ್ರವಾಹವನ್ನು ಕೂಡಿಕೊಳ್ಳುವಂತಾಯಿತು.

ಕಾಲಾಂತರದಲ್ಲಿ ಮಹಾಪ್ರಭು ಶ್ರೀರಾಮಚಂದ್ರನು ಸೀತಾನ್ವೇಷಣೆಗೆಂದು ದಕ್ಷಿಣ ಭಾರತದ ಭಾಗದಲ್ಲಿ ಸಂಚರಿಸುತ್ತಿದ್ದಾಗ ಆತನಿಗೆ ವಾಯು ಪುತ್ರನಾದ ಆಂಜನೇಯನ ದರ್ಶನವಾಗಿ ಆತನ ಮುಖಾಂತರ ಸುಗ್ರೀವನ ಸಖ್ಯವು ಲಭಿಸಿತು. ಕಪಿಸೇನೆಯು ಲಂಕಾನಗರದತ್ತ ಪ್ರಯಾಣ ಹೊರಟಿತು. ರಾವಣನೊಂದಿಗೆ ಯುದ್ಧಮಾಡಿ ಆತನ ಸಂಹಾರವಾದ ನಂತರ ಆತನ ಸೋದರನಾದ ವಿಭೀಷಣನಿಗೆ ರಾಜ್ಯದಲ್ಲಿ ಪಟ್ಟವನ್ನು ಕಟ್ಟಿ ರಾಮಚಂದ್ರಪ್ರಭು ಮರಳಿ ಅಯೋಧ್ಯಾನಗರವನ್ನು ಕುರಿತು ಪ್ರಯಾಣವನ್ನಾರಂಭಿಸಿದಾಗ ಕೆಲವು ಕಾಲ ಶ್ರೀರಾಮಚಂದ್ರನು ಕಪಿಲಾಶ್ರಮದಲ್ಲಿ ವಿಶ್ರಾಂತಿಯನ್ನು ಪಡೆದುಕೊಂಡು ದಕ್ಷಿಣವಾಹಿನಿಯಾಗಿ ಹರಿಯುತ್ತಿರುವ ಪ್ರವಾಹದ ದಡದಲ್ಲಿ ನನ್ನ ಲಿಂಗವನ್ನು ಪ್ರತಿಷ್ಠಾಪನೆ

ಮಾಡಿದನು. ಅದೇ ಕಾಲಕ್ಕೆ ಆಂಜನೇಯನಿಂದ ತರಲ್ಪಟ್ಟ ಬೇರೊಂದು ಲಿಂಗವನ್ನೂ ಸಹ ಇಲ್ಲಿಯೇ ಪ್ರತಿಷ್ಠಾಪಿಸಲಾಯಿತು. ಆ ಪ್ರತಿಷ್ಠಾಪನಾ ಕಾರ್ಯವು ನಡೆದಾಗ ಸತ್ಯಲೋಕಾಧಿಪತಿಯಾದ ಬ್ರಹ್ಮದೇವನು ಬಂದು ಶ್ರೀರಾಮಚಂದ್ರ ಪ್ರಭುವಿನ ದರ್ಶನವನ್ನು ಪಡೆದುಕೊಂಡನು. ಯಾವ ಸ್ಥಳದಲ್ಲಿ ಇವರಿಬ್ಬರ ಭೇಟಿಯಾಯಿತೋ ಆ ಸ್ಥಳವನ್ನೇ ಮುಂದೆ ನನ್ನ ಭಕ್ತರು ''ರುದ್ರ ಪುಷ್ಕರಿಣಿ'' ಎಂದು ಕರೆಯುತೊಡಗಿದರು. ಶ್ರೀರಾಮಚಂದ್ರಪ್ರಭು ಪರಿವಾರಸಮೇತನಾಗಿ ಬಂದು ಗರಳಪುರಿ ಕ್ಷೇತ್ರಪಾಲನಾದ ನನ್ನ ಪೂಜೆ ಗೈದು ತನ್ನ ಮುಂದಿನ ಪ್ರಯಾಣವನ್ನಾರಂಭಿಸಿದನು''.

ಪತಿಯ ಮಾತುಗಳನ್ನಾಲಿಸುವುದರಲ್ಲಿ ತಲ್ಲೀನಳಾಗಿ ಹೋಗಿದ್ದ ಪಾರ್ವತೀದೇವಿಯು ಮುಗುಳುನಗೆಯಿಂದ ''ಕಪಿಲೆಯ ಕಥೆಯನ್ನು ಹೇಳಿದಿರಿ. ಕೇಳಿ ತುಂಬ ಸಂತೋಷಯವಾಯಿತು. ಇನ್ನು ಕೌಂಡಿಣ್ಯ ನದಿಯ ವಿಚಾರ ಕುರಿತು ತಿಳಿಸಬಹುದಲ್ಲವೇ?'' ಎಂದು ಪುನಃ ಪ್ರಶ್ನೆ ಮಾಡಿದಳು.

ದೇವೀ ಅದೇಕೋ ಇಂದು ಭೂಲೋಕದಲ್ಲಿ ಹರಿವ ನದಿಗಳ ವಿಚಾರಗಳನ್ನರಿತುಕೊಳ್ಳಲು ನಿನ್ನ ಮನಸ್ಸು ತುಂಬ ಉತ್ಸುಕವಾದಂತೆ ತೋರುತ್ತಿದೆ. ಆಗಲಿ. ಕೌಂಡಿಣ್ಯ ನದಿಯ ಪ್ರವಾಹದ ಬಗ್ಗೆಯೂ ನಿನಗೆ ವಿವರಗಳನ್ನು ಕೊಡುತ್ತೇನೆ.

''ಒಂದು ಕಾಲದಲ್ಲಿ ಈ ಕ್ಷೇತ್ರದಲ್ಲಿ ಕೌಂಡಿಣ್ಯ ಮುನಿಗಳು ತಮ್ಮ ಪತ್ನಿಯಾದ ಸುಶೀಲೆಯೊಂದಿಗೆ ಸುಖವಾಗಿ ಸಂಸಾರ ಮಾಡಿಕೊಂಡಿದ್ದರು. ಋಷಿ ಪತ್ನಿಯಾದ ಸುಶೀಲೆ ಬಹು ಶ್ರದ್ಧಾಭಕ್ತಿ ಸಂಪನ್ನಳು. ಪತಿಯೇ ಪರದೈವವೆಂದು ಭಾವಿಸಿ ಸದಾಕಾಲವೂ ತನ್ನ ಪತಿಯ ಸೇವೆಯಲ್ಲಿ ನಿರತಳಾಗಿರುತ್ತಿದ್ದಳು. ಪತಿವ್ರತಾಶಿರೋಮಣಿಯಾದ ಸುಶೀಲೆಯು ಒಂದು ದಿನ ತನ್ನ ಕೈಯಲ್ಲಿ ಅನಂತಪದ್ಮನಾಭನ ದೋರ ಬಂಧನ ಮಾಡಿಕೊಂಡಿರುವುದನ್ನು ಕಂಡ ಮುನಿಗಳಿಗೆ ವಿಪರೀತ ಕೋಪವು ಬಂದಿತು.

ತನ್ನನ್ನು ವಶಪಡಿಸಿಕೊಳ್ಳಲು ಈ ತರಹದ ಪ್ರಯತ್ನ ನಡೆಸಿರುವಳೆಂದು ಭಾವಿಸಿ ಅವಳು ಧರಿಸಿದ ದಾರವನ್ನು ಬಲಾತ್ಕಾರದಿಂದ ಕಿತ್ತು ತೆಗೆದುಕೊಂಡು ಅಗ್ನಿಯಲ್ಲಿ ಹಾಕಿದರು. ಅದನ್ನು ಕಂಡು ಗಾಬರಿಯಾದ ಆ ಸಾಧ್ವೀಮಣಿಯು ಲಗುಬಗೆಯಿಂದ ಆ ದಾರವನ್ನು ಅಗ್ನಿಯಿಂದ ತೆಗೆದು ಪುನಃ ಅದನ್ನು ಹಾಲಲ್ಲಿ ಅದ್ದಿ ಅದನ್ನು ಧಾರಣ ಮಾಡಿಕೊಂಡಳು. ಈ ಘಟನೆಯ ನಂತರ ಅವರ ಆಶ್ರಮಕ್ಕೆ ಕಳ್ಳಕಾಕರು ನುಗ್ಗಿ ಇದ್ದುದನ್ನೆಲ್ಲ ದೋಚಿಕೊಂಡು ಹೋದರು. ಆಶ್ರಮದ ಗೋಸಂಪತ್ತಿನಪಹರಣವಾಯಿತು. ದಂಪತಿಗಳು ನಿರ್ಗತಿಕರಾಗಿ ಪಾಪಪರಿಹಾರಕ್ಕಾಗಿ ಪಶ್ಚಾತ್ತಾಪದಿಂದ ತೀರ್ಥಕ್ಷೇತ್ರಗಳ ಯಾತ್ರೆಯನ್ನಾರಂಭಿಸಿದರು. ತಾವು ಮಾಡಿದ ಪಾಪದ ನಿವಾರಣೆಗಾಗಿ ಅವರಿಬ್ಬರೂ ನನ್ನನ್ನು ಅನನ್ಯವಾಗಿ ಪ್ರಾರ್ಥಿಸತೊಡಗಿದರು. ಆಗ ನಾನು ಅವರ ಸ್ವಪ್ನದಲ್ಲಿ ಕಾಣಿಸಿಕೊಂಡು ಗೋವರ್ಧನ ಪರ್ವತದಲ್ಲಿ ನೀವಿಬ್ಬರೂ ವಾಸ ಮಾಡಿಕೊಂಡಿದ್ದು ನಿಮ್ಮ ತಪವನ್ನು ಮುಂದುವರೆಸಿರಿ. ಸರ್ವಕಾಲದಲ್ಲಿ ಭಕ್ತಿಪುರಸ್ಸರವಾಗಿ ಅನಂತ ಪದ್ಮನಾಭ ವ್ರತವನ್ನಾಚರಿಸಿರಿ. ಅದರಿಂದ ನಿಮ್ಮ ಪಾಪವೆಲ್ಲ ಪರಿಹಾರವಾಗಿ ಕಾಲಾಂತರದಲ್ಲಿ ನೀವು ಪ್ರವಾಹರೂಪದಿಂದ ಮಹಾತೊರೆಯನ್ನು ಕೂಡಿಕೊಳ್ಳುವಿರಿ. ನಿಮ್ಮ ತಪೋಮಹಿಮೆಯಿಂದ ಹರಿಯುವ ಜಲವೇ ಕೌಂಡಿಣ್ಯ ನದಿ ಎಂಬ ಹೆಸರಿನಿಂದ ಲೋಕ ಪ್ರಸಿದ್ಧಿಯನ್ನು ಹೊಂದುವಂತಾಗಲಿ. ನಿಮ್ಮ ಪ್ರವಾಹವು ಕಪಿಲಾಪ್ರವಾಹವನ್ನು ಕೂಡುವ ಸಂಗಮ ಸ್ಥಳದಲ್ಲಿ ಆದಿಕೇಶವನು ಹಾಗೂ ಆರು ವೈರಿಗಳ ನಂಜಿನಿಂದ ಮಾನವನನ್ನು ಉದ್ಧರಿಸುವುದಕ್ಕಾಗಿ ನಾನೂ ಆ ಸ್ಥಳದಲ್ಲಿ ಸದಾಕಾಲವೂ ಸನ್ನಿಹಿತರಾಗಿರುತ್ತೇವೆ – ಎಂದು ಆ ದಂಪತಿಗಳಿಗೆ ವರವನ್ನಿತ್ತಿರುವೆನು. ಒಂದು ಕಾಲದಲ್ಲಿ ನಡೆದುಹೋದ ಈ ಘಟನೆಯುಗಳನ್ನೆಲ್ಲ ಚಿಂತಿಸಿ ಯಾರು ಶ್ರದ್ಧಾಭಕ್ತಿಯಿಂದ ಆ ಸಂಗಮದಲ್ಲಿ ಸ್ನಾನ ಮಾಡುತ್ತಾರೋ ಅವರಿಗೆ ಸದ್ಗತಿಯು ಪ್ರಾಪ್ತಿಯಾಗುವುದರಲ್ಲಿ ಯಾವ ಸಂದೇಹವಿಲ್ಲ'' ಎಂದು ಕೌಂಡಿಣ್ಯ ನದಿಯ ಹುಟ್ಟಿನ ವಿಚಾರವನ್ನು ತಿಳಿಸಿದ ಮಹಾದೇವನು ಈ ಪ್ರವಾಹಗಳ ಮಹತಿಯನ್ನು ಕುರಿತು ''ದೇವೀ ನಿನಗೆ ಇನ್ನೊಂದು ಮಹತ್ವದ ವಿಚಾರವನ್ನು ತಿಳಿಸಿ ಹೇಳುವೆ.''

''ಇಂದ್ರಾದಿ ದೇವತೆಗಳಿಗೆಲ್ಲ ವೈಕುಂಠದಲ್ಲಿ ವಿಷ್ಣು ಹಾಗೂ ಕೈಲಾಸದಲ್ಲಿ ನಾನು ಇಲ್ಲದಿರುವುದನ್ನು ಕಂಡು ಅವರೆಲ್ಲರೂ ಭೂಲೋಕದಲ್ಲಿಳಿದು ನಮ್ಮನ್ನು ಹುಡುಕಲು ಸಂಚರಿಸತೊಡಗಿದರು. ಒಂದು ದಿನ ಆಗ ನಾವಿಬ್ಬರೂ ಗರಳಪುರಿ ಕ್ಷೇತ್ರದ ಮುಂಭಾಗದಲ್ಲಿ ಹರಿಯುತ್ತಿರುವ ಪ್ರವಾಹದ ದಂಡೆ ಗುಂಟ ಸಂಚರಿಸುತ್ತಿರುವುದನ್ನು ಕಂಡು ಕ್ಷಣಕಾಲ ಅಚ್ಚರಿಗೊಂಡರು. ದೇವತೆಗಳೆಲ್ಲರೂ ಸುಪ್ರೀತರಾಗಿ ನಮ್ಮಿಬ್ಬರನ್ನು ಕುರಿತು ಸ್ತೋತ್ರ ಮಾಡತೊಡಗಿದರು. ಯಾವ ಸ್ಥಳದಲ್ಲಿ ನಮ್ಮಿಬ್ಬರನ್ನು ಅವರು ಕಂಡಿದ್ದರೋ ಆ ಸ್ಥಳವನ್ನು ಶಂಕರ ನಾರಾಯಣ ಸ್ಥಳವೆಂದು ಹೊಗಳತೊಡಗಿದರು. ಅದೇ ಸಮಯದಲ್ಲಿ ಭೂದೇವಿಯು ಆ ದೇವತಾಗಣದ ಮುಂಭಾಗಕ್ಕೆ ಬಂದು ಅಂಜಲಿಬದ್ಧಳಾಗಿ ''ದಯಾಮಯರಾದ ಪ್ರಭುಗಳೇ ನನ್ನ ದೇಹದ ಮೇಲೆ ಬಿದ್ದ ಹನಿ ವಿಷವನ್ನು ಪರಿಹರಿಸಿ ಪವಿತ್ರಮಯವಾದ ಅಮೃತಸದೃಶವಾದ ಪ್ರವಾಹವು ಹರಿಯುವಂತೆ ಮಾಡಿದ ನೀವಿಬ್ಬರೂ ಇದೇ ಸ್ಥಳದಲ್ಲಿ ಸದಾಕಾಲವೂ ಇದ್ದುಕೊಂಡು ನಿಮ್ಮ ದರ್ಶನಾರ್ಥಿಗಳಾಗಿ ಬರುವ ಭಕ್ತರ ಮನೋಭೀಷ್ಟಗಳನ್ನು ನೆರವೇರುವಂತೆ ಅನುಗ್ರಹ ಮಾಡಿರಿ. ಅರಿಷಡ್ವರ್ಗದ ನಂಜನ್ನು ತೊಳೆದು ಹಾಕುವ ಈ ಕ್ಷೇತ್ರ ಇನ್ನು ಮುಂದೆ ''ನಂಜನಗೂಡು'' ಎಂಬ ಹೆಸರಿನಿಂದಲೇ ಕರೆಯುವಂತೆ ವರವನ್ನು ದಯಪಾಲಿಸಿರಿ'' ಎಂದು ಕೇಳಿಕೊಂಡಳು. ಅವಳ ಪ್ರಾರ್ಥನಾನುಸಾರವಾಗಿ ವಿಷ್ಣುರೂಪದಲ್ಲಿ ಕೇಶವನನ್ನು ಹಾಗೂ ಶಿವರೂಪದಲ್ಲಿ ನಂಜುಡೇಶ್ವರನಾದ ನನ್ನನ್ನೂ ಈ ಕ್ಷೇತ್ರದಲ್ಲಿ ಕಾಣುವಂತಾಗಿರುವುದು. ನಿನ್ನ ಪತಿಯಾದ ನನ್ನನ್ನು ಭಗವದ್ಭಕ್ತರಾದ ಹರಿದಾಸರು ಮನೋನಿಯಾಮಕನೆಂದು ಹಾಡಿ ಹೊಗಳಲಾರಂಭಿಸಿದರು. ಈ ನೆಲದ ಮಣ್ಣು ಕುಷ್ಠರೋಗದಂತಹ ಮಹಾರೋಗವನ್ನು ಪರಿಹರಿಸುವ ಶಕ್ತಿಯನ್ನು ಹೊಂದಲೆಂದು ನಾವು ಆ ಭೂತಾಯಿಗೆ ವರವನ್ನಿತ್ತು ಸಂತೋಷಪಡಿಸಿದೆವು.

ಯಾರು ಒಂದು ತಿಂಗಳುವರೆಗೆ ಈ ಕ್ಷೇತ್ರದಲ್ಲಿದ್ದುಕೊಂಡು ಪ್ರತಿದಿನ

ಆ ಪ್ರವಾಹದಲ್ಲಿ ಸ್ನಾನಮಾಡಿ ನಮ್ಮ ದರ್ಶನ ಪಡೆಯುವರೋ ಅಂಥವರಿಗೆ ಯಮನ ಭಾದೆಯಾಗದಂತೆ ವರವನ್ನಿತ್ತೆವು. ಕಾರ್ತಿಕ ಸೋಮವಾರವಂತೂ ನನಗೆ ಬಹುಪ್ರಿಯವಾದ ದಿನವಾಗಿರುವುದು. ಅಂದು ಅರುಣೋದಯಕ್ಕೆ ಸರಿಯಾಗಿ ಕಪಿಲೆಯಲ್ಲಿ ಸ್ನಾನಮಾಡಿ ಯಾರು ನನ್ನ ದರ್ಶನ ಪಡೆಯುವರೋ ಅಂಥವರಿಗೆ ಸದ್ಗತಿಯು ಪ್ರಾಪ್ತವಾಗುವುದು. ಅಷ್ಟ ತೀರ್ಥಗಳು ಕಪಿಲಾ ಪ್ರವಾಹದಲ್ಲಿ ಸಂಕ್ರಮಣ ಕಾಲದಲ್ಲಿ ಸಾನ್ನಿಧ್ಯಹೊಂದುವವು. ಆದುದರಿಂದಲೇ ಈ ಜಲವನ್ನು "ಚತುಃಷಷ್ಟಿ ತೀರ್ಥಾಲಂಕೃತ ಮಣಿಕರ್ಣಿಕಾ ತೀರ್ಥ" ಎಂದು ಭಕ್ತಿಭಾವದಿಂದ ಪೂಜಿಸುವ ಸಂಪ್ರದಾಯವು ಪ್ರಾರಂಭವಾಯಿತು.

ದೇವದಾನವರು ಕ್ಷೀರಸಮುದ್ರ ಮಂಥನವನ್ನು ಆರಂಭಿಸಿದಾಗ ಶ್ರೀದೇವಿಯು (ಲಕ್ಷ್ಮೀ) ಕಾಣಿಸಿಕೊಂಡಳು. ಅವಳ ತಂದೆ ಶ್ರೀದೇವಿಯನ್ನು ಈ ಸಂಗಮಸ್ಥಾನದಲ್ಲಿಯೇ ಧಾರೆ ಎರೆದು ಕೊಟ್ಟಿರುವನು. ಕಾಲಾಂತರದಲ್ಲಿ ಶ್ರೀಮನ್ನಾರಾಯಣನು ಜಮದಗ್ನಿಯ ಮಗನಾಗಿ ಜನ್ಮವೆತ್ತಿದ ಕಾಲದಲ್ಲಿ ತಂದೆಯ ಆಜ್ಞಾನುಸಾರ ಮಾತೆಯ ಶಿರವನ್ನೇ ಕಡಿದುಹಾಕಿದನು. ಆಜ್ಞಾಪರಿಪಾಲಕನಾದ ಪುತ್ರನ ಪ್ರಾರ್ಥನಾನುಸಾರ ಜಮದಗ್ನಿ ಋಷಿಯು ಪುನಃ ತನ್ನ ಪತ್ನಿಯು ಬದುಕುವಂತೆ ನೋಡಿಕೊಂಡರು. ಆದರೇನು ಮಾತೃಹತ್ಯಾ ದೋಷ ಪರುಶುರಾಮನಿಂದ ಪರಿಹಾರವಾಗಲಿಲ್ಲ. ಮುನಿಗಳು ಗರಳಪುರಿ ಕ್ಷೇತ್ರದ ಕಪಿಲಾ ತೀರ್ಥದಲ್ಲಿ ಸ್ನಾನಮಾಡಿ ನಂಜುಡೇಶ್ವರನ ದರ್ಶನ ಮಾಡುವುದರಿಂದ ನಿನ್ನ ಮಾತೃಹತ್ಯಾದೋಷವು ಪರಿಹಾರವಾಗುವುದೆಂದು ತಿಳಿಸಿದರು. ಆದುದರಿಂದ ಪರಶುರಾಮನಿಂದ ಪೂಜಿತನಾದ ನಂಜುಂಡೇಶ್ವರನೆಂದು ಭಕ್ತರು ನನ್ನನ್ನು ಪೂಜಿಸತೊಡಗಿದರು. ದೇವೇಂದ್ರನಿಗೂ ಅಹಲ್ಯೆಗೂ ಗೌತಮರು ಶಾಪವನ್ನಿತ್ತಿದ್ದರು. ಮುಂದೆ ಪಶ್ಚಾತ್ತಾಪದಗ್ಧರಾಗಿ ಅವರಿಬ್ಬರೂ ಈ ಪ್ರವಾಹದಲ್ಲಿ ಮಿಂದು ನಂಜುಂಡೇಶ್ವರನಾದ ನನ್ನ ದರ್ಶನ ಮಾಡಿದ ಫಲವಾಗಿ ಗೌತಮರು ಶಾಪದಿಂದ ವಿಮುಕ್ತರಾದರು. ನನ್ನ ಈ ಮಾತಿಗೆ ಸಾಕ್ಷೀಭೂತವೆಂಬಂತೆ

ಮಹಾ ನಕ್ಷತ್ರ ಕಾಲದಲ್ಲಿ ಈಗಲೂ ಗೌತಮರ ರಥೋತ್ಸವವು ನೆರವೇರಿಸಲ್ಪಡುವುದು. ಅದನ್ನು "ಗೌತಮ ತಿರುನಾಳ್" ಎಂದು ಗುರುತಿಸುತ್ತಿರುವರು.

ಪತಿಯ ಮುಖದಿಂದ ಪ್ರವಾಹರೂಪದಲ್ಲಿ ಹೊರಹೊಮ್ಮಿದ ಕಪಿಲಾ ಕೌಂಡಿಣ್ಯ ನದಿಗಳ ಕಥೆಯನ್ನಾಲಿಸಿದ ಪಾರ್ವತಿದೇವಿಯು "ಹೇ ಕೈಲಾಸಾಧಿಪತಿಯೇ, ತಮ್ಮ ಮುಖದಿಂದ ಗಳಪುರಿಯ ಪುರಾಣಗಳನ್ನಾಲಿಸಿದಂತೆಲ್ಲ ನನಗೂ ತಮ್ಮೊಂದಿಗೆ ಆ ಕ್ಷೇತ್ರದಲ್ಲಿ ಸದಾಕಾಲವೂ ವಾಸವಾಗಿರುವ ಅಪೇಕ್ಷೆಯಾಗತೊಡಗಿದೆ. ಸತಿಪತಿಗಳಾದ ನಾವಿಬ್ಬರೂ ನಮ್ಮ ದರ್ಶನಾರ್ಥಿಗಳಾಗಿ ಬರುವ ಭಕ್ತರನ್ನು ಉದ್ಧಾರಮಾಡುವ ಕಾರ್ಯದಲ್ಲಿ ನಿರತರಾಗೋಣ. ತಾವು ನಂಜುಂಡೇಶ್ವರರಾದರೆ ನಾನು ತಮ್ಮ ಅರ್ಧಾಂಗಿಯಲ್ಲವೆ? ನಾನು ನಂಜುಡೇಶ್ವರನ ರಾಣಿ ಎಂದು ಅತ್ಯಂತ ನಮ್ರತಾ ಭಾವದಿಂದ ಪಾದಕ್ಕೆ ನಮಸ್ಕಾರ ಮಾಡಿದಳು.

ಈ ಘಟನೆಗಳನ್ನೆಲ್ಲ ಸೂತರು ಶೌನಕಾದಿ ಮುನಿಗಳಿಗೆ ವಿವರವಾಗಿ ಹೇಳಿದರು. ಇದುವೆ ಮುಂದೆ ಸ್ಕಾಂದ ಪುರಾಣದ ಒಂದು ಭಾಗವಾಗಿ ರೂಪತಾಳಿತು.

ಸ್ಕಾಂದಪುರಾಣಾಂತರ್ಗತ ಗರಳಪುರಿ ಮಹಾತ್ಮ್ಯ ಶುಭಮಸ್ತು

# ವಿದ್ಯಾಧೀಶರು

ಇತಿಹಾಸವನ್ನು ನಿಖರವಾಗಿ ಗುರುತಿಸಬೇಕಾದಲ್ಲಿ ಸಾಕಷ್ಟು ಶೋಧನೆ ಬಹು ಅಗತ್ಯ. ಮಧ್ಯಯುಗೀನ ಭಾರತದಲ್ಲಿ ನಡೆದುಹೋದ ಅನೇಕ ಘಟನೆಗಳನ್ನು ಅಭ್ಯಾಸ ಮಾಡಲು ಹೊರಟಾಗ ಶ್ರೀಮದುತ್ತರಾದಿ ಮಠಾಧೀಶರಾಗಿದ್ದ ಪ್ರಾತಃಸ್ಮರಣೀಯರೆನಿಸಿದ ವಿದ್ಯಾಧೀಶರೆನಿಸಿದ ಗುರುವರ್ಯರನ್ನು ಕುರಿತು ಈ ಲೇಖನವಿದೆ.

ಈ ಪೂಜ್ಯರ ಕಾಲವನ್ನು ಇ.ಸ. 1619 ರಿಂದು 1631ರವರೆಗೆ ಎಂದು ಗುರುತಿಸಲಾಗಿದೆ. ಪೂಜ್ಯರು ವೃಂದಾವನಸ್ಥರಾದ ಅಲ್ಪಾವಧಿಯಲ್ಲಿ ಜನಾರ್ಧನ ಸೂರಿಗಳಿಂದ ರಚಿತವಾದ ಕಾವ್ಯದಲ್ಲಿ ವಿದ್ಯಾಧೀಶರ ಜೀವನ ಕುರಿತು ಅನೇಕ ಮಹತ್ವದ ನಿರ್ಣಯಗಳು ಕಾಣಸಿಗುತ್ತವೆ.

ವಸಿಷ್ಠ ಗೋತ್ರದ ತ್ರಿವಿಕ್ರಮಾಚಾರ್ಯರ ಮಗ ಆನಂದ ರಾಮಾಚಾರ್ಯ ಹಾಗೂ ಗಂಗಾಬಾಯಿ ಇವರಿಗೆ ಶ್ರೀ ನರಸಿಂಹದೇವನ ಪರಮಾನುಗ್ರಹದಿಂದ ಹುಟ್ಟಿದ ಮಗನಿಗೆ ಆ ದಂಪತಿಗಳು ನರಸಿಂಹನೆಂದೇ ನಾಮಕರಣ ಮಾಡಿದರು. ಈ ಕುಟುಂಬವು ಗೋದಾವರಿ ತೀರದ ಪುಣತಾಂಬಾ ಎಂಬ ಅಗ್ರಹಾರದ ನಿವಾಸಿಗಳು. ಉಪನಯನಾನಂತರ ವಿದ್ಯಾಭ್ಯಾಸವು ಸಂಪೂರ್ಣವಾದ ಮೇಲೆ ಮಗನಿಗೆ ವಿವಾಹ ಮಾಡಿದರು. ನರಸಿಂಹಾಚಾರ್ಯರು ಕೈಹಿಡಿದ ಪತ್ನಿಯ ಹೆಸರು ರುಕ್ಮಿಣೀಬಾಯಿ ಎಂದು ತಿಳಿದು ಬರುವುದು. ನರಸಿಂಹಾಚಾರ್ಯರು ಅಗ್ರಹಾರದ ತ್ರಿವಿಕ್ರಮ ದೇವಾಲಯದಲ್ಲಿ ಶಿಷ್ಯರಿಗೆ ಪಾಠ ಪ್ರವಚನದಲ್ಲಿ ನಿರತರಾದರು. ಆಚಾರ್ಯರ ತಂದೆ ಹಾಗೂ ತಾತನವರ ಕಾಲವನ್ನು ಇ.ಸ. 1550 ರಿಂದ

1619 ಎಂದು ಅಂದಾಜು ಮಾಡಬಹುದು. ಅಂದು ಪುಣತಾಂಬೆಯ ಭಾಗವೆಲ್ಲ ಯವನರ ಆಧೀನ ಪ್ರದೇಶವಾಗಿತ್ತು. ಆ ಯವನನು ತಾನೇ ಭೂಲೋಕದ ದೇವನೆಂಬಂತೆ ಅಹಂಕಾರಭರಿತನಾಗಿದ್ದನೆಂದು ಕಾವ್ಯಗಳಲ್ಲಿ ವರ್ಣಿಸಲಾಗಿರುವದು. ಪಂಡಿತ ನರಸಿಂಹಾಚಾರ್ಯರಿಗೆ ಆಶ್ರಮವಾದ ಕಾಲದಲ್ಲಿ (ಅಂದರೆ 1605 ರಿಂದ 1627) ದಿಲ್ಲಿಯಲ್ಲಿ ಜಹಂಗೀರ ಬಾದಶಹನ ಕಾಲವೆಂದು ಗುರುತಿಸಲಾಗಿರುವದು. ಮೊಗಲರು ಆ ಕಾಲದಲ್ಲಿ ನಿಜಾಮನೊಂದಿಗೆ ಹೋರಾಟವನ್ನಾರಂಭಿಸಿದ್ದರು. ಮಲ್ಲಿಕ ಅಂಬರನು ಅವರೊಂದಿಗೆ ಸಾಕಷ್ಟು ಹೋರಾಡಿದ. ಈ ಯಮನರ ಹಾವಳಿಯಿಂದಾಗಿ ಬೇಸತ್ತು ಹೆದರಿದ ಅನೇಕ ಕುಟುಂಬಗಳೊಂದಿಗೆ ಪಂ. ನರಸಿಂಹಾಚಾರ್ಯರು ನಾಸಿಕ ಕ್ಷೇತ್ರಕ್ಕೆ ಬಂದು ವಾಸಮಾಡತೊಡಗಿದರು. ಅವರು ಎಷ್ಟು ದಿನಗಳ ಕಾಲ ನಾಸಿಕದಲ್ಲಿದ್ದರೆಂಬ ಮಾತನ್ನು ನಿಖರವಾಗಿ ಕಾವ್ಯದಿಂದ ತಿಳಿದು ಬರುವುದಿಲ್ಲ. ಕಸ್ತೂರಿಯನ್ನು ಎಲ್ಲಿಟ್ಟರೇನು ಅದು ತನ್ನ ನೈಜತೆ ಬೀರದೇ ಇದ್ದೀತೇ? ಪಂ. ನರಸಿಂಹಾಚಾರ್ಯರ ಕೀರ್ತಿಯು ದಶದಿಕ್ಕುಗಳಲ್ಲಿ ಹರಡುವಂತಾಯಿತು. ಅಹಮ್ಮದ್ ನಗರ ಜಿಲ್ಲೆಯ ಸಂಗಮನೇರ ನಿವಾಸಿಯಾಗಿದ್ದ ದತ್ತ ಪಂಡಿತ ಎಂಬಾತನು ತಾನಿದ್ದಲ್ಲಿಗೆ ಆಚಾರ್ಯರನ್ನು ಕರೆಸಿಕೊಂಡು ಅವರಿಗೆ ಬಹು ದೊಡ್ಡ ಸನ್ಮಾನ ಮಾಡಿದನೆಂಬ ಮಾತು ಕಾವ್ಯಾಭ್ಯಾಸದಿಂದ ತಿಳಿದು ಬರುವದು. ಈ ದತ್ತ ಪಂಡಿತನ ಹೆಸರನ್ನೋದಿದಾಗ ಇತಿಹಾಸದ ಅಭ್ಯಾಸಿಗರಿಗೆ ಅನೇಕ ಸಂದರ್ಭಗಳ ನೆನಪಾಗುವದು ಸಹಜ. ಇ.ಸ. 1632ರಲ್ಲಿ ಮೊಗಲರಿಂದ ದೌಲತಾಬಾದ್ ಕೋಟೆಗೆ ಮುತ್ತಿಗೆ ಹಾಕಲಾಯಿತು. ಕೋಟೆಯಲ್ಲಿದ್ದವರಿಗೆಲ್ಲ ಆಹಾರ ಧಾನ್ಯಗಳ ಕೊರತೆಯು ಕಾಡಲಾರಂಭಿಸಿತು. ಕೋಟೆಯ ಒಳಭಾಗದಲ್ಲಿದ್ದವರನ್ನು ಪಾರುಮಾಡಲು ಶಿವಾಜಿಯ ತಂದೆ ಶಹಾಜೀ ಭೋಸ್ಲೇ ಹಾಗೂ ರಣದುಲ್ಲಾ ಖಾನ್ ಮೊದಲಾದವರು ಹಗಲಿರುಳೆನ್ನದೆ ಹೋರಾಡಿದರೂ ಪ್ರಯೋಜನವಾಗಲಿಲ್ಲ. ಕೊನೆಗೊಮ್ಮೆ ಕೋಟೆಯ ಸರದಾರನಾದ ದತ್ತಾಜಿ ನಾಗನಾಥನನ್ನು ಮುಂದಿಟ್ಟುಕೊಂಡು

ಒಳಗಿದ್ದವರೆಲ್ಲ ಅಗಸೆಯ ಬಾಗಿಲು ತೆರೆದು ಶರಣಾಗತರಾದರು. ಈ ಸಂದರ್ಭದಲ್ಲಿ ದತ್ತಾಜಿಯ ಹೆಸರನ್ನು ನಾವು ಕಾಣುತ್ತೇವೆ.

ಇದೇ ರೀತಿಯಲ್ಲಿ ಇನ್ನೊಂದು ಸಂದರ್ಭವೂ ಇದೆ. ಬೆಂಗಳೂರು ನಿವಾಸಿಯಾಗಿದ್ದ ಶಹಾಜಿಯ ದರ್ಬಾರಿನಲ್ಲಿದ್ದ ಜಯರಾಮ ಪಿಂಡೆ ಈತನಿಂದ ರಾಧಾ ಮಾಧವ ವಿಲಾಸ ಚಂಪೂ ಕಾವ್ಯವು ರಚಿತವಾಯಿತು. ಈ ಕಾವ್ಯದಲ್ಲಿಯೂ ಸಹ ದತ್ತಾಜಿ ನಾಗನಾಥನ ಹೆಸರು ಕಾಣಸಿಗುತ್ತದೆ. ಈತ ಶಹಾಜಿ ರಾಜನ ಆಶ್ರಿತ ಮುತ್ಸದ್ದಿ ಎಂದೆನಿಸಿಕೊಳ್ಳುತ್ತಿದ್ದನು. (ಈ ಚಂಪೂ ಕಾವ್ಯ ರಚನೆಯ ಕಾಲವೂ ಸಹ 1653 ರಿಂದ 1658).

ಶ್ರೀ ಪಂಡಿತ ನರಸಿಂಹಾಚಾರ್ಯರು ಸಂಗಮನೇರ ನಿವಾಸಿ ದತ್ತಾಜಿಯಿಂದ ನಿರೂಪ ಪಡೆದುಕೊಂಡು ಪೈಠಣ ಹಾಗೂ ಪೈಠಣದಿಂದ ಪಂಢರಾಪುರಕ್ಕೆ ಆಗಮಿಸಿದರು. ಈ ಕ್ಷೇತ್ರಕ್ಕೆ ಆಚಾರ್ಯ ಮಧ್ವರು ಬಂದು ಹೋಗಿದ್ದರು. ಅವರು ಬಂದ ಕಾಲದಲ್ಲಿ ಭೀಮಾ ನದಿಯ ದಂಡೆಯ ಮೇಲೆ ಮಠವು ನಿರ್ಮಾಣವಾಗಿತ್ತು. ಶ್ರೀ ನರಸಿಂಹಾಚಾರ್ಯರು ಆ ಮಠವನ್ನು ಪುನಃ ಜೀರ್ಣೋದ್ಧಾರ ಮಾಡಿದರೆಂಬ ಮಾತನ್ನೂ ಸಹ ಸೂರಿಯವರಿಂದ ರಚಿತವಾದ ಕಾವ್ಯದಲ್ಲಿ ನಾವು ಕಾಣುವೆವು.

ಆಚಾರ್ಯರು ಪಂಢರಪುರದ ಶ್ರೀ ವಿಠ್ಠಲನ ಸನ್ನಿಧಿಯಲ್ಲಿ ಬಿಡಾರ ಮಾಡಿದಾಗ ವಿಜಾಪುರದ ಆದಿಲ್‌ಶಾಹಿ ಸಾಮ್ರಾಜ್ಯದಲ್ಲಿದ್ದ ದ್ವೈತ ಸಂಪ್ರದಾಯಿಯಾಗಿದ್ದ ಲಕ್ಷ್ಮಣ ಪಂಡಿತನು ಪಂಢರಪುರಕ್ಕೆ ತನ್ನ ವಿಶ್ವಾಸಿಕ ಪ್ರತಿನಿಧಿಗಳನ್ನು ಕಳುಹಿಸಿಕೊಟ್ಟು ಪಂ. ನರಸಿಂಹಾಚಾರ್ಯರನ್ನು ವಿಜಾಪುರಕ್ಕೆ ಬರಮಾಡಿಕೊಂಡನು. ಶಾಹೀ ದರ್ಬಾರಿನಿಂದ ಆಚಾರ್ಯರಿಗೆ ಪಲ್ಲಕ್ಕಿ, ಶ್ವೇತಛತ್ರ, ಚಾಮರ ಮೊದಲಾದವುಗಳೊಂದಿಗೆ ಸಂಭ್ರಮದ ಮರ್ಯಾದೆಯಾಗುವಂತೆ ನೋಡಿಕೊಂಡನು. ನಂತರ ಭೀಮಾತೀರದ ಹಿರೇಮಣೂರು ಗ್ರಾಮದಲ್ಲಿ ಬಿಡಾರ ಮಾಡಿದ್ದ ವೇದೇಶ ತೀರ್ಥರ ದರ್ಶನಾಕಾಂಕ್ಷಿಗಳಾಗಿ ಆಚಾರ್ಯರು ಹೊರಟರು. ಆಚಾರ್ಯರ

ಪಾಂಡಿತ್ಯವನ್ನು ಕಂಡು ಗುರುಗಳು ಹರ್ಷಿತರಾಗಿ ಅವರಿಗೆ ಶ್ರೀಮದಾಚಾರ್ಯರ ಪೀಠದಲ್ಲಿ ಕುಳ್ಳಿರಿಸಿ ಸನ್ಯಾಸ ದೀಕ್ಷೆಯನ್ನಿತ್ತು ಶ್ರೀ ವಿದ್ಯಾಧೀಶರೆಂದು ನಾಮಕರಣ ಮಾಡಿದರು. (ಕಾಲ 1611 ಅಥವಾ 1612).

ಶ್ರೀ ವಿದ್ಯಾಧೀಶ ಪ್ರಭುಗಳು ತಮ್ಮ ಮೊದಲನೇ ಚಾತುರ್ಮಾಸ್ಯ ವ್ರತವನ್ನು ಕೃಷ್ಣಾ ತೀರದ ಸಾಂಗಲಿಯಲ್ಲಿ ಮುಗಿಸಿಕೊಂಡು ಕೊಲ್ಲಾಪುರದ ಮಹಾಲಕ್ಷ್ಮಿಯ ದರ್ಶನ ಪಡೆದುಕೊಂಡು ಗುರುಗಳೊಂದಿಗೆ ಬೃಹದ್‌ಪುರಿ ಎಂಬಲ್ಲಿಗೆ ದಯಮಾಡಿಸಿದರು. ಇದನ್ನು ಆಂಧ್ರಪ್ರದೇಶದಲ್ಲಿರುವ ಪೆನಗೊಂಡಾ ಎಂದು ಗುರುತಿಸಲಾಗಿರುವುದು. ಈ ಭಾಗವೆಲ್ಲ ವಿಜಯನಗರ ಸಾಮ್ರಾಟ ಎರಡನೇ ವೆಂಕಟಪತಿಯ ಅಧೀನದಲ್ಲಿತ್ತು. (ಈತನ ಕಾಲವು ಇ.ಸ. 1583 ರಿಂದ 1694). ಶ್ರೀ ವಿದ್ಯಾಧೀಶರ ಪಾಂಡಿತ್ಯಕ್ಕೆ ಮಾರುಹೋದ ನೃಪತಿಯು ಶ್ರೀಮಠಕ್ಕೆ ನಾಲ್ಕು ಗ್ರಾಮಗಳನ್ನು ದಾನವಾಗಿ ಕೊಟ್ಟನಲ್ಲದೆ ಶ್ರೀಗಳವರನ್ನು ಬಹಳವಾಗಿ ಕೊಂಡಾಡಿದನು, ಅವರ ಅನುಗ್ರಹವನ್ನು ಪಡೆದನು.

ಶ್ರೀ ವಿದ್ಯಾಧೀಶರು ನಂತರ ಉಡುಪಿ, ರಾಮೇಶ್ವರ. ಕೆಳದಿಯ ಇಕ್ಕೇರಿ ಮೊದಲಾದ ಭಾಗಗಳಲ್ಲಿ ಸಂಚರಿಸುತ್ತ ಶ್ರೀಮಜ್ಜಯತೀರ್ಥರು ಆಶ್ರಮ ಸ್ವೀಕಾರ ಮಾಡಿದ ಸಂಧ್ಯಾವಳಿ ಎಂಬಲ್ಲಿಗೆ ಬಂದರು. ಅನಂತರ ಅವರು ಓರೇಮಣೂರಿಗೆ ಆಗಮಿಸಿದರು. ಅಗ ಗುರುಗಳಾದ ಶ್ರೀ ವೇದೇಶತೀರ್ಥರಿಗೆ ಸ್ವಲ್ಪ ದೇಹಾಲಸ್ಯವು ಕಾಣಿಸಿಕೊಂಡಿತು. ಭೀಮರಥಿ ತೀರದಲ್ಲಿರುವ ಶ್ರೀ ಚನ್ನಕೇಶವನ ಸಾನ್ನಿಧ್ಯದಲ್ಲಿಯೇ ಅವರು ಹರಿಪಾದವನ್ನು ಕೂಡಿಕೊಂಡರು. ಓರೇಮಣೂರಿನಲ್ಲಿಯೇ ಅವರ ವೃಂದಾವನವನ್ನು ಮಾಡಲಾಯಿತು.

ಜನಾರ್ಧನ ಸೂರಿಯುವರಿಂದ ರಚಿತವಾದ ಕಾವ್ಯದ ಮುಖ್ಯಭಾಗವೆಂದರೆ ಶ್ರೀ ವಿದ್ಯಾಧೀಶರು ದಕ್ಷಿಣದ ಗಂಗೆ ಎಂದೆನಿಸಿಕೊಳ್ಳುವ ಗೋದಾವರಿ ನದಿಯ ಪ್ರದಕ್ಷಿಣೆ ಮಾಡಿದ ಭಾಗವಾಗಿರುವದು. ಪೂಜ್ಯರು

ನಾಸಿಕ ಕ್ಷೇತ್ರದಿಂದಲೇ ಈ ಕಾರ್ಯವನ್ನಾರಂಭಿಸಿದರು. ಇದು ಇ.ಸ. 1626 ರಿಂದ 27ರ ಕಾಲವಾಗಿರಬಹುದು. ಶ್ರೀಗಳವರೊಂದಿಗೆ ನೂರಾರು ಜನ ಶಿಷ್ಯ ಪರಿವಾರವಿತ್ತು. ಶ್ರೀಗಳವರು ಸ್ವತಃ ಶ್ರೀ ಮೂಲ ಸೀತಾರಾಮ ದೇವರ ಪೆಟ್ಟಿಗೆಯನ್ನು ಹೆಗಲ ಮೇಲಿರಿಸಿಕೊಂಡು ಗ್ರಾಮೈಕರಾತ್ರರಾಗಿ ಸಂಚಾರವನ್ನಾರಂಭಿಸಿದರು. ಭದ್ರಾಚಲ ಯಾತ್ರೆಯನ್ನು ಮುಗಿಸಿಕೊಂಡು ಶ್ರೀಮನ್ನಾರಾಯಣನ ದರ್ಶನಾರ್ಥಿಗಳಾಗಿ ಉತ್ತರ ಭಾರತದ ಸಂಚಾರವನ್ನಾರಂಭಿಸಿದರು. ಕವಿಗಳಾದ ಸೂರಿಯವರು ಈ ಮಹಾನುಭಾವರ ನಿತ್ಯದ ದಿನಚರಿಯನ್ನು ಬಹು ಸೊಗಸಾಗಿ ವರ್ಣಿಸಿರುವದುಂಟು.

ಪ್ರತಿದಿನ ಪ್ರಾತಃಕಾಲದಲ್ಲೆದ್ದು ನಂತರ ಗಜೇಂದ್ರ ಮೋಕ್ಷ ಶ್ರವಣ ಮಾಡುತ್ತಿದ್ದರು. ಗೋದಾವರಿಯಲ್ಲಿ ಮಿಂದು ವಸ್ತ್ರಧಾರಣ ಮಾಡಿಕೊಂಡು ಗೋಪೀಚಂದನ ಮುದ್ರಾಧಾರಣಾದಿಗಳನ್ನು ಮಾಡಿಕೊಂಡು ಸೂರ್ಯದೇವನಿಗೆ ವಂದಿಸಿ ಪ್ರಣವ ಮಂತ್ರಗಳನ್ನು ಮುಗಿಸುತ್ತಿದ್ದರು. ರಾಮಚಂದ್ರನೆಂಬ ಬ್ರಾಹ್ಮಣನಿಂದ ಪ್ರತಿ ದಿನವೂ ಶ್ರೀಮದ್ಭಾಗವತ ಶ್ರವಣವಾಗುತ್ತಿತ್ತು. ನಂತರ ಸಭಾಗೃಹಕ್ಕೆ ಆಗಮಿಸಿದಾಗ ಮೀಕತರಾದ ಶಿಷ್ಯರ ಹೆಸರುಗಳನ್ನೂ ಸಹ ಸೂರಿಗಳು ಕೊಟ್ಟಿರುವದುಂಟು. ಶ್ರೀ ವೇದನಿಧಿತೀರ್ಥರು, ಶ್ರೀ ಸತ್ಯವ್ರತತೀರ್ಥರು, ಶ್ರೀ ವಿದ್ಯಾಧೀಶರ ಪೂರ್ವಾಶ್ರಮದ ಸೋದರರಾದ ಶ್ರೀ ಕೇಶವಾಚಾರ್ಯರು, ನಾರಾಯಣಾಚಾರ್ಯರು ಯಾದವಾಚಾರ್ಯರು ಹಾಗೂ ರಾಮಹರಿ, ಧರ್ಮಸೂರಿ ಮೊದಲಾದ ಪಂಡಿತರೊಂದಿಗೆ ವೇದಾಂತದ ಭಾಗದಲ್ಲಿ ವಿಶೇಷ ಚರ್ಚೆಗಳಾಗುತ್ತಿದ್ದವು. ಅನಂತರ ಮೂಲರಾಮ ದೇವರ ಪೂಜೆ, ನೈವೇದ್ಯ. ಭೋಜನಾನಂತರ ಪುನಃ ಸಾಯಂಕಾಲ ಗೋದಾವರಿಯಲ್ಲಿ ಸ್ನಾನ ಮಾಡಿ ಸಾಯಂಕಾಲ ಪೂಜೆ ಹಾಗೂ ಮಂಗಳಾರತಿ ಮೊದಲಾದ ಕಾರ್ಯಕ್ರಮಗಳನ್ನು ಮುಗಿಸುತ್ತಿದ್ದರು. ಅವರು ದರ್ಭಾಸನದಲ್ಲಿ ಮಲಗುತ್ತಿದ್ದರು.

ಗುರುಗಳು ತೀರ್ಥಯಾತ್ರೆ ಮಾಡುತ್ತಾ ವಾರಣಾಸಿ ಹಾಗೂ ಗಯಾ ಕ್ಷೇತ್ರಗಳನ್ನು ಸಂದರ್ಶಿಸಿ ಬದರೀನಾಥ ಯಾತ್ರೆ ಮುಗಿಸಿಕೊಂಡು ಗಂಗಾ, ಯಮುನಾ ಪ್ರಸ್ಥಭೂಮಿ ಎಂದೆನಿಸಿಕೊಂಡ ಏಕಚಕ್ರನಗರಕ್ಕೆ ಆಗಮಿಸಿದರು. ಇದು ಬರೇಲಿ ಹಾಗೂ ಮುರಾದಾಬಾದ ಸಮೀಪದ ಸ್ಥಳವಾಗಿರಬಹುದೆಂದು ಇತಿಹಾಸಜ್ಞರ ಅಭಿಪ್ರಾಯವಾಗಿರುವದು. ಬಹುಕಾಲದ ಪ್ರಯಾಣದಿಂದಾಗಿ ಶ್ರೀಗಳವರಿಗೆ ಸ್ವಲ್ಪ ಆಯಾಸವೆನಿಸತೊಡಗಿತು. ಪ್ರಜಾಪತಿ ಸಂವತ್ಸರ ಪುಷ್ಯ ಕೃಷ್ಣ ಚತುರ್ದಶಿ ಪ್ರಾತಃಕಾಲ ಗುರುವರ್ಯರು ಹರಿಪಾದವನ್ನಾಶ್ರಯಿಸಿದರು. (ವೃಂದಾವನಸ್ಥರಾದರು). ಈ ಪ್ರಜಾಪತಿ ಸಂವತ್ಸರವು ಅಂದಿನ ಕಾಲದ ಇ.ಸ. 1631ರ ಮಾರ್ಚ ತಿಂಗಳಿನ ಪ್ರಾರಂಭದ ಕಾಲವೆನಿಸುವದು. ಶ್ರೀಗಳವರು 1620ರಲ್ಲಿ ಅಥವಾ 1627ರಲ್ಲಿ ಗೋದಾವರಿಯ ಪ್ರದಕ್ಷಿಣೆಯನ್ನಾರಂಭಿಸಿದ್ದರು.

ವಿ. ಟಿಪ್ಪಣಿ :

ಬೆಂಗಳೂರು ನಿವಾಸಿಗಳಾಗಿರುವ ಶ್ರೀ ಕೆ.ಟಿ. ಪಾಂಡುರಂಗಿಯವರು ನನ್ನ ಗುರುಗಳಾಗಿದ್ದ ಪದ್ಮಶ್ರೀ ನಿವೃತ್ತ ಐ.ಎ.ಎಸ್. ಅಧಿಕಾರಿಗಳಾಗಿದ್ದ ಡಾ : ಸೇತು ಮಾಧವರಾವ್ ಪಗಡಿ ಇವರಿಗೆ ಶ್ರೀ ವಿದ್ಯಾಧೀಶರನ್ನು ಕುರಿತಾದ ಮಾಹಿತಿಯನ್ನೊದಗಿಸುವಂತೆ ಕೇಳಿದ್ದರು. ಪಗಡಿಯವರಿಂದ ರಚಿತವಾದ ಕರ್ನಾಟಕ ಹಾಗೂ ಮಹಾರಾಷ್ಟ್ರ ಸುವರ್ಣಕಾಲ ಎಂಬ ಗ್ರಂಥದಲ್ಲಿ ಪ್ರಕಟಿಸಿದ ಲೇಖನದ ಬಹು ಭಾಗವನ್ನು ಇಲ್ಲಿ ಉದ್ಧರಿಸಲಾಗಿರುವದು.

# ಬಾವಿಯಲ್ಲಿ ಅಪರಿಮಿತ ಸಂಪತ್ತು

1857ರಲ್ಲಿ ನಡೆದ ಬಂಡಾಯದ ಕೇಂದ್ರ ಬಿಂದು ಎಂದೆನಿಸಿದ ಬೀಠೂರಿನಲ್ಲಿ ನಾನಾ ಸಾಹೇಬ ಪೇಶ್ವೆ ಈತನು ತನ್ನ ಸಂಗಡಿಗರಿಂದ ಬ್ರಿಟೀಷರೊಂದಿಗೆ ಹೋರಾಡಿ ಪರಾಭವಗೊಂಡ ನಂತರ ತನ್ನಲ್ಲಿದ್ದ ಅಪರಿಮಿತವಾದ ಭಂಡಾರದಲ್ಲಿ ಎರಡು ಭಾಗಗಳನ್ನು ಮಾಡಿ ಒಂದನ್ನು ಗ್ವಾಲೀಯರಕ್ಕೂ ಇನ್ನೊಂದನ್ನು ಬೀಠೂರಿನಲ್ಲಿ ತಾನು ವಾಸಿಸುತ್ತಿದ್ದ ತನ್ನರಮನೆಯ ಬಾವಿಯಲ್ಲಿಯೂ ಹಾಕಿ ಹೋಗಿರುವನೆಂಬ ಸುದ್ದಿಯು ಎಲ್ಲೆಡೆಯಲ್ಲಿಯೂ ಹಬ್ಬಿತು. ದೇಶದ್ರೋಹಿಯಾಗಿದ್ದ ಅಂಗೂರಿ ತಿವಾರಿ ಎಂಬಾತನಿಂದ ಈ ವಿಚಾರವು ಆಂಗ್ಲರ ಕಿವಿಗೆ ಮುಟ್ಟಿತು. ಇದೇ ವಿಚಾರವನ್ನು ಕುರಿತು ಆಂಗ್ಲ ಅಧಿಕಾರಿಯೊಬ್ಬನು ಈ ಕೆಳಗಿನಂತೆ ಬರೆದಿಟ್ಟಿರುವನು.

ಬಿಠೂರಿನಲ್ಲಿರುವ ನಾನಾಸಾಹೇಬನ ರಾಜವಾಡೆಯನ್ನು ಸಂಪೂರ್ಣ ನಾಶ ಮಾಡಿದ ನಂತರ ಎಷ್ಟೋ ದಿನಗಳಾದ ಮೇಲೆ ರಾಯಲ್ ಎಂಜಿನ್ ಸರ್ವೀಸಿನಲ್ಲಿ ಕೆಲಸ ಮಾಡುತ್ತಿದ್ದ ಲೆಫ್ಟಿನೆಂಟ್ ಮೂಲಕ ಈತನು ಅನೇಕ ರೀತಿಯಲ್ಲಿ ಪರಿಶ್ರಮವಹಿಸಿದ ನಂತರ ನಾನಾ ಸಾಹೇಬನ ಖಾಸಗೀ ಭಂಡಾರವನ್ನು ವಶಪಡಿಸಿಕೊಂಡನು. ಅತ್ಯಂತ ಬೆಲೆಬಾಳುವ ನಿಧಿಯು ನಾನಾಸಾಹೇಬನು ತಾನು ವಾಸವಾಗಿದ್ದ ಅರಮನೆಯ ಒಂದು ಬಾವಿಯಲ್ಲಿ - ಹಾಕಿದ್ದು ಸಿಕ್ಕಿತು. ಅದರಲ್ಲಿ ಬಂಗಾರದ ಗಟ್ಟಿಗಳೇ ಹೆಚ್ಚಾಗಿದ್ದವು. ಕಲಾತ್ಮಕವಾದ ಆಭರಣಗಳು ಮಾತ್ರ ಹೆಚ್ಚಾಗಿ ಕಾಣಬರಲಿಲ್ಲ.

ಸಾರಾಯಿ ಘಾಟದ ಯುದ್ಧಾನಂತರ ತಾತ್ಯಾಟೋಪಿಯು ಪರಾಭವವಾಯಿತು. ಆಗ ಬ್ರಿಟೀಷರ ಸೇನೆಯು ಪುನಃ ಬೀಠೂರನ್ನು ಪ್ರವೇಶ ಮಾಡಿತು. (1857 ಡಿಸೆಂಬರ್) ಆಗ ಅವರು ಈ ಗುಪ್ತ ನಿಧಿಗಾಗಿ ಹುಡುಕಾಡಲು ಪ್ರಯತ್ನಿಸತೊಡಗಿದರು. ಆಂಗ್ಲರ ಸೇನೆ ಸಂಪೂರ್ಣವಾಗಿ ಡಿಸೆಂಬರ್ 13 ರಂದು ಬೀಠೂರಿಗೆ ಬಂದು ತಲುಪಿದಾಗ ಆ ಸೇನೆಯಲ್ಲಿ ಬಂಡಾಯದ ಸ್ಮೃತಿಗಳನ್ನೆಲ್ಲ ಬರೆದಿಡುತ್ತಿದ್ದ ಸುಪ್ರಸಿದ್ಧ ಲೇಖಕನಾದ ಫೋರ್ಬ್ಸ ಮಿಚೇಲ್‌ನ ಆಗಮನವಾಗಿತ್ತು. ಅಂದು ಆತನು ಬರೆದಿಟ್ಟು ಹೋದ ಲೇಖನ ಸಾಮಗ್ರಿಗಳಿಂದಾಗಿ ಹಿಂದಿನ ಕಾಲದ ಅನೇಕ ಘಟನೆಗಳ ಮೇಲೆ ಹೊಸ ಪ್ರಕ್ಹಾಶ ಬೀಳುವಂತಾಗಿರುವದು.

ಸಾರಾಯಿಘಾಟದ ಪರಾಭವದ ನಂತರ ಬ್ರಿಟೀಷರ ಸೇನೆಯು ಅನೇಕ ತೋಪುಗಳನ್ನು ಬಂಡಾಯಗಾರರಿಂದ ಕಿತ್ತುಕೊಂಡು ಅವುಗಳನ್ನೆಲ್ಲ ಬೀಠೂರಿಗೆ ಸಾಗಿಸಿತು. ನಮ್ಮ ಸೇನೆ ಬೀಠೂರಿಗೆ ಬರಲು ಬಲವಾದ ಮುಖ್ಯ ಕಾರಣವೆಂದರೆ ನಾನಾ ಸಾಹೇಬನು ರಾಜವಾಡೆಯಲ್ಲಿರುವ ಒಂದು ಬಾವಿಯಲ್ಲಿ ಅಪರಿಮಿತ ಸಂಪತ್ತನ್ನು ಹಾಕಿ ಹೋಗಿರುವುದಾಗಿ ಆತನ ಸೇವೆಯಲ್ಲಿದ್ದವರಿಂದಲೇ ತಿಳಿದು ಬಂದಿತ್ತು. ನಾವು ಬೀಠೂರಿಗೆ ಬಂದು ರಾಜವಾಡೆಯಲ್ಲಿದ್ದ ಬಾವಿಯನ್ನು ನೋಡಿದಾಗ ಅದು ಸಾಮಾನ್ಯ ಬಾವಿಯಾಗಿ ತೋರಲಿಲ್ಲ. ಅದರ ಆಳವನ್ನು ಪರೀಕ್ಷಿಸುವುದೂ ಬಹು ಕಷ್ಟಸಾಧ್ಯವಾದ ಮಾತಾಗಿ ತೋರಿತು. ಬಾವಿಯ ಮೇಲ್ಭಾಗದಲ್ಲಿ ಕಬ್ಬಿಣದ ಸರಳುಗಳನ್ನು ನಾಲ್ಕೂ ಕಡೆಯಿಂದ ಭದ್ರಪಡಿಸಲಾಗಿತ್ತು. ಮೊದಲು ಅವುಗಳನ್ನು ಬಿಡಿಸುವ ಕಾರ್ಯವು ಆರಂಭಗೊಂಡಿತು. ಚರ್ಮದ ಚೀಲಗಳಿಂದ ನೀರನ್ನೆತ್ತುವ ಕಾರ್ಯವನ್ನಾರಂಭಿಸಲಾಯಿತು. ಆದರೆ ಅದರಿಂದ ಯಾವ ಪ್ರಯೋಜನವಾಗಲಿಲ್ಲ. ಆಗ ನಾಲ್ಕೂ ಭಾಗಗಳಿಂದ ನೀರನ್ನೆತ್ತಲು ಒಂದು ನೂರು ಜನರ ತಂಡವನ್ನೇ ಆ ಕೆಲಸಕ್ಕಾಗಿ ನಿಯಮಿಸಲಾಯಿತು. ಅವ್ಯಾಹತವಾಗಿ ಹಗಲು ರಾತ್ರಿಗಳೆನ್ನದೆ ಸರತಿಯ

ಮೇಲೆ ಭಾರತದ ಜೀತದಾಳುಗಳಿಂದ ನೀರೆತ್ತುವ ಕಾರ್ಯ ನಡೆಯಿತು. ನೀರು ಸ್ವಲ್ಪ ಕಡಿಮೆಯಾಗಿದೆ ಎಂದು ತಿಳಿದಾಗ ಕೆಲವರನ್ನು ಬಾವಿಯೊಳಗೆ ಇಳಿಬಿಡಲಾಯಿತು. ಹಾಗೆ ಬಾವಿಗಿಳಿದವರನ್ನು ಎರಡು ಗಂಟೆಗೊಬ್ಬರಂತೆ ಮೇಲ್ಭಾಗಕ್ಕೆ ಎಳೆದುಕೊಳ್ಳತೊಡಗಿದರು. ಈ ಕಾರ್ಯವು ಡಿಸೆಂಬರ್ 15 ರಿಂದ 26 ರವರೆಗೆ ಎಡೆಬಿಡದೆ ಸಾಗಿತು. ಈ ಕಾರ್ಯದಲ್ಲಿ ಪಟ್ಟ ಶ್ರಮವು ಅವರ್ಣನೀಯ. ಡಿಸೆಂಬರ್ 26 ರಂದು ಬಲವಾದ ಪೆಟ್ಟಿಗೆಗಳು ಕಾಣಿಸಿಕೊಂಡವು. ಬಹು ಪರಿಶ್ರಮದಿಂದ ಅವುಗಳನ್ನು ಮೇಲಕ್ಕೆ ತರಲಾಯಿತು. ಆ ಪೆಟ್ಟಿಗೆಗಳಲ್ಲದೆ ಮೂವತ್ತು ಲಕ್ಷ ರೂಪಾಯಿ ನಗದು ಹಣಗಳಿಂದ ಕೂಡಿದ ಅನೇಕ ಮೂಟೆಗಳನ್ನು ಹೊರತರಲಾಯಿತು. ಅಲ್ಲದೆ ಬೆಳ್ಳಿ ಬಂಗಾರಗಳಿಂದ ಕೂಡಿದ ಅನೇಕ ವಸ್ತುಗಳು ಅದೇ ಬಾವಿಯಲ್ಲಿ ದೊರತವು. ಕೊನೆಯ ಬಾಜೀರಾಯನು ಬಳಸುತ್ತಿದ್ದ ಬೆಳ್ಳಿಯ ಅಂಬಾರಿಯೂ ಸಹ ಇದೇ ಬಾವಿಯಲ್ಲಿ ದೊರೆಯಿತು. ಈ ಎಲ್ಲ ಪದಾರ್ಥಗಳನ್ನು ಪರೀಕ್ಷಿಸಿದ ಆಂಗ್ಲ ಅಧಿಕಾರಿಗಳು ಇವೆಲ್ಲವುಗಳ ಬೆಲೆಯು ಅಂದಿನ ಕಾಲದಲ್ಲಿ ಒಂದು ಕೋಟಿ ಮೂವತ್ತು ಲಕ್ಷ ರೂಪಾಯಿಗಳಾಗ ಬಹುದೆಂದು ತೀರ್ಮಾನಿಸಿದರು.

ಕರ್ನಲ್ ಗಾರ್ಡನ್ ಅಬೆಕ್‌ಯಾಂಡರ್ ಈತನು ಅಂದು ದೊರೆತ ಎಲ್ಲ ವಸ್ತುಗಳನ್ನು ವಿವರವಾಗಿ ತನ್ನ ಪುಸ್ತಕದಲ್ಲಿ ಪುಟಗಳ ಕ್ರಮ ಸಂಖ್ಯೆ 194 ಹಾಗೂ 195 ಪುಟದಲ್ಲಿ ಸ್ಪಷ್ಟವಾಗಿ ಬರೆದಿಟ್ಟಿರುವನು. ಅವುಗಳ ವಿವರವು ಈ ಕೆಳಗಿನಂತಿರುವದು. (1) ಹದಿನಾಲ್ಕು ಬೆಳ್ಳಿಯ ತಟ್ಟೆಗಳು (2) ಮೂವತ್ತು ಬೆಳ್ಳಿಯ ಬಟ್ಟಲುಗಳು (3) ನೀರು ಕುಡಿಯುವ ಲೋಟಗಳು 80. ಬಹು ಕಾಲದಿಂದ ಇವು ನೀರಲ್ಲಿದ್ದ ಕಾರಣ ಬಹು ಕಪ್ಪಾಗಿ ಹೋಗಿದ್ದವು. ಕೆಲವು ಪೆಟ್ಟಿಗೆಗಳಲ್ಲಿದ್ದ ರೂಪಾಯಿಗಳೂ ಸಹ ಕಪ್ಪುಹಿಡಿದಿದ್ದವು. ಪ್ರತಿಯೊಂದು ಪೆಟ್ಟಿಗೆಯಲ್ಲಿದ್ದ ಗಂಟುಗಳಲ್ಲಿ ಹದಿನಾರು ಸಾವಿರ ರೂಪಾಯಿಗಳಿದ್ದವು. ಬಂಗಾರದ ಆಭರಣಗಳ ಬೆಲೆಯೂ

ಅವುಗಳಿಗಂಟಿಸಿದ ರತ್ನ, ಮುತ್ತು, ಪಚ್ಚ ಇವುಗಳ ಬೆಲೆಯನ್ನು ಕಟ್ಟುವದು ಅಸಾಧ್ಯವಾದ ಮಾತೆನಿಸುತ್ತಿತ್ತು.

ಬಹು ಕಾಲದಿಂದ ಪೇಶ್ವೇ ಮನೆತನದವರು ರಕ್ಷಿಸಿಕೊಂಡು ಬಂದಿದ್ದ ಅಪರಿಮಿತ ಧನ ಕನಕಾದಿ ಆಭರಣಗಳನ್ನು ನಾವು ಅತಿ ಪರಿಶ್ರಮದಿಂದ ಹೊರತೆಗೆದು ಅದನೆಲ್ಲ ಮೇಲಧಿಕಾರಿಗಳಿಗೆ ವರದಿ ಮಾಡಿದೆವು.

# ಕೊನೆಯ ಪೇಶ್ವೆ ಬಾಜೀರಾಯನ ಕಾಣಿಕೆ

ಕಾಲಾಂತರದಲ್ಲಿ ಈ ಪೀಠದಲ್ಲಿ ವಿರಾಜಮಾನರಾಗಿದ್ದ ಯತಿಗಳ ದರ್ಶನವೂ ಗಂಗಾತೀರದಲ್ಲಿ ಬ್ರಹ್ಮಾವರ್ತದಲ್ಲಿ ವಾಸವಾಗಿದ್ದ ಬಾಜೀರಾಯರಿಗೆ ಲಭಿಸಿತು. (ಕಾಲ 1850) ಅಂದು ಆಂಗ್ಲರ ಆಜ್ಞಾನುಸಾರವಾಗಿ ಬಾಜೀರಾಯನು ಬ್ರಹ್ಮಾವರ್ತದಲ್ಲಿದ್ದಾಗ ಆತನ ಭೇಟಿಗೆ ಯಾರ್ಯಾರು ಬಂದು ಹೋದರೆಂಬ ವಿಷಯವು ಇತಿಹಾಸದ ಕಾಗದ ಪತ್ರಗಳಿಂದ ತಿಳಿದು ಬರುವುದು. ಈ ಮಾತಿಗೆ ಉದಾಹರಣೆಯಾಗಿ ಕೆಲವರ ಹೆಸರನ್ನಾದರೂ ಇಲ್ಲಿ ಕೊಡುವುದು ಉಚಿತ. 1) ಸರದಾರ ವಾಂಚೂರಕರ, 2) ಸಮರ್ಥ ರಾಮದಾಸ ಮಠದ ಗ್ವಾಲೇರ ಮಠದ ಅಧಿಕಾರಿಗಳಾಗಿದ್ದ ಮನೋಹರ ಅಂಬಾ (ಇವರು ಎರಡು ಸಲ ಬ್ರಹ್ಮಾವರ್ತಕ್ಕೆ ಬಂದು ಬಾಜೀರಾಯರನ್ನು ಕಂಡು ಹೋಗಿದ್ದಾರೆ. ಈ ಮಾತು ಅವರ ಚರಿತ್ರೆದಿಂದಲೇ ತಿಳಿದು ಬರುವುದು).

**ಸತ್ಯ ಪರಾಯಣರು ( ಕಾಲ 1841 ರಿಂದ 1863 )**

ಶ್ರೀ ಸತ್ಯಪರಾಯಣರು ಕಾಶಿ, ಅಯೋಧ್ಯಾ, ಮಥುರಾ, ಈ ತೀರ್ಥಕ್ಷೇತ್ರಗಳನ್ನು ಸಂದರ್ಶನ ಮಾಡುತ್ತ ದಿಲ್ಲಿಗೆ ಬಂದು ತಲುಪಿದರು. ದಿಲ್ಲಿಯಲ್ಲಿ ಗೋಪೀಚಂದ ಹಾಗೂ ತಲಸೀದಾಸ ಎಂಬ ನಾಮಾಂಕಿತರಾದ ಗೃಹಸ್ಥರು ಶ್ರೀಗಳವರಿಗೆ ಬಹುಪರಿಯಾಗಿ ಆದರೋಪಚಾರ ಗೈದರು. ಅನಂತರ ಶ್ರೀಗಳವರು ಕಾನ್‌ಪುರಕ್ಕೆ ಆಗಮಿಸಿದರು. ಆ ಸಮಯದಲ್ಲಿ ಬ್ರಹ್ಮಾವರ್ತದಲ್ಲಿದ್ದ ಬಿಡಾರ ಮಾಡಿಕೊಂಡಿದ್ದ ಎರಡನೇ ಬಾಜೀರಾಮನು ತನ್ನ ಆಶ್ರಯದಲ್ಲಿದ್ದ ಪಂಡಿತರನ್ನು ಕಾನಪುರಕ್ಕೆ ಕಳಿಸಿ ಶ್ರೀಗಳವರು

ಬ್ರಹ್ಮಾವರ್ತಕ್ಕೆ ಬಂದು ಹೋಗಬೇಕೆಂಬ ಪ್ರಾರ್ಥನೆ ಸಲ್ಲಿಸಿದನು. ಈ ಕಾರ್ಯಕ್ಕಾಗಿ ದಿವಾನ್ ಪರಶುರಾಮ ಭಾವು ಪಟವರ್ಧನ ಅವರನ್ನು ನಿಯಮಿಸಲಾಗಿತ್ತು. ಶ್ರೀಗಳವರು ತಮ್ಮ ಸಕಲ ಪರಿವಾರ ಸಮೇತರಾಗಿ ಬ್ರಹ್ಮಾವರ್ತಕ್ಕೆ ಆಗಮಿಸಿದರು. ಅವರನ್ನು ವಾಲ್ಮೀಕಿ ಆಶ್ರಮದಲ್ಲಿಳಿಸಲಾಯಿತು. ಗರ್ಭವತಿಯಾದ ಸೀತಾಮಾತೆಯನ್ನು ಲಕ್ಷ್ಮಣನು ಇಲ್ಲಿಯೇ ಬಿಟ್ಟು ಹೋದನಂತೆ. ಇಲ್ಲಿಯೇ ವಾಲ್ಮೀಕಿ ಋಷಿಗಳ ಆಶ್ರಯದಲ್ಲಿ ಲವ-ಕುಶರು ಬೆಳೆದರು. ಶ್ರೀಗಳವರು ಪ್ರಾತಃಕಾಲದಲ್ಲಿ ಗಂಗೆಯಲ್ಲಿ ಸ್ನಾನಮಾಡಿ ಪ್ರಾತಃಕಾಲದ ಪೂಜೆಯನ್ನು ಮುಗಿಸಿಕೊಂಡು ಮಧ್ಯಾಹ್ನದ ಪೂಜೆಗೆಂದು ಬಿಡಾರದತ್ತ ಸಾಗಿದ್ದರು. ಅವರ ಹೆಗಲ ಮೇಲೆ ಶ್ರೀರಾಮ ದೇವರ ಪೆಟ್ಟಿಗೆಗಳಿದ್ದವು. ದೂರದಲ್ಲಿ ಸ್ನಾನಕ್ಕಿಳಿದಿದ್ದ ಬಾಜೀರಾಯನು ಈ ದೃಶ್ಯವನ್ನು ಕಂಡನು. ಆತ ಲಕ್ಷ್ಮಣಘಾಟಿನಲ್ಲಿ ಸ್ನಾನ ಮಾಡುತ್ತಿದ್ದನು. ಈ ದೃಶ್ಯದಿಂದ ಆತನಿಗೆ ಬಹು ಅಚ್ಚರಿಯೆನಿಸಿತು. ಸಮೀಪದಲ್ಲಿದ್ದ ಆಶ್ರಿತರನ್ನು ಕರೆದು -

''ಇದೇನು ಸನ್ಯಾಸಿಗಳು ಹೀಗೆ ಪಾದಚಾರಿಗಳಾಗಿ ಏಕಾಂಗಿಗಳಾಗಿ ಹೊರಟಿರುವರಲ್ಲ'' ಎಂದು ಕೇಳಿದನು. ಆಗ ಅವರು,

''ಮಹಾಪ್ರಭುಗಳೇ, ಈ ಉತ್ತರಾದಿ ಮಠದ ಯತಿಗಳು ಮೊದಲಿನಿಂದಲೂ ಮಹಾವಿರಕ್ತರು. ಅವರಿಗೆ ಜರತಾರಿ ಅಂಚಿನ ಪಂಚೆಗಳನ್ನು ಕೊಟ್ಟರೂ ಸಹ ಮೊದಲು ಆ ಅಂಚುಗಳನ್ನು ತೆಗೆದು ಹಾಕಿ ಸಾಮಾನ್ಯ ವಸ್ತ್ರಗಳನ್ನು ಧಾರಣ ಮಾಡುತ್ತಾರೆ. ಇನ್ನು ಸಾಮಾನ್ಯ ಪಂಚೆಗಳನ್ನೂ ಕೂಡ ಹರಿದು ಉಟ್ಟುಕೊಳ್ಳುವ ಸಂಪ್ರದಾಯವಿದೆ. ಕೊರಳಲ್ಲಿ ತುಳಸಿಯ ಮಾಲೆ ವಿನಃ ಬೇರೆ ಯಾವುದನ್ನೂ ಧರಿಸುವುದಿಲ್ಲ, ಉತ್ಸವಾದಿಗಳಲ್ಲಿ ಸರ್ವಾಲಂಕೃತವಾದ ಆನೆಯ ಮೇಲೆ ಕುಳಿತುಕೊಂಡಿದ್ದರೂ ಸಾಮಾನ್ಯ ವಸ್ತ್ರ ಧರಿಸಿ ತಮ್ಮ ಸಮ್ಮುಖದಲ್ಲಿ ಗುರುಗಳ ಗ್ರಂಥವನ್ನಿಟ್ಟುಕೊಂಡಿರುತ್ತಾರೆ. ಈ ಎಲ್ಲ ವೈಭವಗಳು ವೇದವ್ಯಾಸರಿಗೆ ಸಮರ್ಪಿತ ಎಂಬುದೇ ಅದರ ಭಾವವಾಗಿರುತ್ತದೆ. ಈ

ಯತಿಗಳು ತಲೆಗೆ ಕಿರೀಟವನ್ನಾಗಲೀ ಮುಂಡಾಸವನ್ನಾಗಲೀ ಧಾರಣ ಮಾಡುವುದಿಲ್ಲ. ತಮ್ಮ ಕಾವಿ ವಸ್ತ್ರವನ್ನೇ ಸುತ್ತಿಕೊಳ್ಳುವುದುಂಟು. ಇವರು ತಮ್ಮ ದೇವರ ಪೆಟ್ಟಿಗೆಯನ್ನು ಹೆಗಲ ಮೇಲಿಟ್ಟುಕೊಂಡೇ ಸಂಚರಿಸುತ್ತಾರೆ.''

ಈ ವಿಚಾರಗಳನ್ನು ಕೇಳಿದ ಬಾಜೀರಾಯನು ತನ್ನ ಅಹ್ನೀಕವನ್ನು ಬೇಗನೇ ಮುಗಿಸಿ ಕೊಂಡು ಮೇಲೆ ಬಂದು ದೂರದಿಂದ ಆಗಮಿಸುತ್ತಿದ್ದ ಶ್ರೀಗಳವರ ಪಾದಸ್ಪರ್ಶ ಮಾಡಿದನು. ಹಾಗೂ ಪೂಜ್ಯರಾದ ತಾವು ನಮ್ಮ ರಾಜವಾಡೆಗೆ ಆಗಮಿಸಬೇಕೆಂದು ಆಗ್ರಹಪೂರ್ವಕ ಅವರನ್ನು ತಾನೇ ಮುಂದಾಗಿ ಕರೆದುಕೊಂಡು ಹೊರಟನು. ಅಂದಿನ ಶ್ರೀರಾಮದೇವರ ಪೂಜೆ, ರಾಜವಾಡೆಯಲ್ಲಾಯಿತು. ಒಂದು ವಾರದವರೆಗೆ ಅವರನ್ನು ತನ್ನ ರಾಜಗೃಹದಲ್ಲಿಯೇ ಇರಿಸಿಕೊಂಡಿದ್ದನು. ಕಡೆಯ ದಿನ ಬಾಜೀರಾಯನು ಬೆಳ್ಳಿಯ ತಟ್ಟೆಯಲ್ಲಿ ಮೂವತ್ತು ಸಾವಿರ ರೂಪಾಯಿಗಳನ್ನು ತಂದು ರಾಮದೇವರಿಗರ್ಪಿಸಿದನು. ಮಧ್ಯಭಾಗದಲ್ಲಿ ರತ್ನದ ಪದಕವಿದ್ದ ಮುತ್ತಿನ ಕಂಠಾಭರಣವನ್ನೂ, ವೈಜಯಂತೀಮಾಲೆಯನ್ನೂ ಹಾಗೂ ಬೆಳ್ಳಿ ಬಂಗಾರದ ಆಭರಣಗಳಿಂದ ಅಲಂಕೃತವಾಗಿದ್ದ ಎರಡು ಆನೆಗಳನ್ನೂ ಶ್ರೀಗಳವರಿಗೆ ಅರ್ಪಿಸಿದನು. ನಂತರ ಶ್ರೀಗಳವರು ಬಾಜೀರಾಯನಿಂದ ನಿರೂಪ ಪಡೆದುಕೊಂಡು ಜಗನ್ನಾಥ ಪುರಿಯತ್ತ ಪ್ರಯಾಣ ಹೊರಟರು.

1818ರಲ್ಲಿ ಪೇಶ್ವೆ ಪದವಿಯನ್ನು ಕಳೆದುಕೊಂಡಿದ್ದರೂ ಸಹ ಶ್ರೀಮಠಕ್ಕೂ ಹಾಗೂ ಪುಣೆಗೂ ಸಂಬಂಧವು ಒಂದಿಲ್ಲೊಂದು ರೀತಿಯಿಂದ ನಡೆಯುತ್ತಾ ಬಂದಿದೆ. ಬಾಜೀರಾಯನು ಕಾಲವಾದರೂ ಸಹ ಆತನಿತ್ತ ದಾನಧರ್ಮಾದಿಗಳ ಆಭರಣವನ್ನು ಇಂದಿಗೂ ಶ್ರೀಮಠದಲ್ಲಿ ನಾವು ಕಾಣಬಹುದಾಗಿದೆ.

1450 ರಿಂದ 1900 ರವರೆಗಿನ ಶ್ರೀ ಮಠದ ವೈಭವ

1. ಅರವತ್ತು ಚಕಡಿಗಳು
2. ಅರವತ್ತು ಹಸುಗಳು

3. ಅರವತ್ತು ಜಾತಿವಂತ ಕುದರೆಗಳು
4. ಆರು ಒಂಟೆಗಳು
5. ಆರು ಆನೆಗಳು
6. ಹಿರೇ ಉಗ್ರಾಣ ಕಾಯುವವರು 40 ಜನ ಪಠಾಣರು
7. ಚಿಕ್ಕ ಉಗ್ರಾಣ ಕಾಯುವವರು 20 ಜನ ಪಠಾಣರು
8. ಶ್ರೀಮಠದ ದಿವಾನ್‌ರು
9. ಹವಾಲ್‌ದಾರ್ - 16 ಜನರು
10. ಜಮಾದಾರ್ - 8 ಜನರು
11. ಮುಜುಂದಾರ - 2
12. ಮೇಣೆಗಳು - 4
13. ಬೋಯಿಗಳು
14. ಛತ್ರ ಚಾಮರ ಕರಣಿಕ ವಾದ್ಯ ಊದುವವರು
15. ಭಾಲದಾರ್, ನಗಾರಿ, ನೌಬತ್ತು
16. ಪ್ರತಿದಿನ ಜಾತಿವಂತ ಹಸು, ಕುದುರೆ, ಆನೆಗಳು ಶ್ರೀಗಳವರ ದರ್ಶನಕ್ಕೆ ಬಂದು ಹೋಗುವ ಸಂಪ್ರದಾಯವಿತ್ತು.
17. ಗ್ರಂಥ ಭಂಡಾರಕರು

    ಆತನದೇ ಮೂರು ಚಕ್ಕಡಿಗಳು, ಡೇರೆ, ತಂಬೂ, ಹಿಲಾಲುಗಳ ಮೇಲಧಿಕಾರಿಗಳು ಆರು ಜನ.
18. ಸಂಚಾರದಲ್ಲಿ ಒಂದೇ ಕ್ಯಾಂಪು, ಕವಾಲದಾರರು ಸುತ್ತೆಲ್ಲ ಅಡ್ಡಾಡಿ ಬರುತ್ತಿದ್ದರು. ಬಾರ್ನಿಸಿ ಹಾಗೂ ಬಖೈರಿಯಾತ್‌ಗಳನ್ನು ಇಡುತ್ತಿದ್ದರು.

# ಸರ್ವಸ್ವವನ್ನು ಶ್ರೀಮಠಕ್ಕೊಪ್ಪಿಸಿದ ರಾಜಮನೆತನ

ಜಗನ್ಮಾತೆಯಾದ ಜಾನಕೀದೇವಿಯನ್ನು ತಮ್ಮ ಮನೆಯ ಮಗಳು ಎಂಬ ಮಮತೆಯಿಂದ ವಜ್ರ, ವೈಢೂರ್ಯ ಮತ್ತು ರತ್ನ ಪೀತಾಂಬರಾದಿ ವಸ್ತುಗಳೊಂದಿಗೆ ಹಾಗೂ ಬಂಗಾರದ ಮರದ ಬಾಗಿಣಗಳೊಂದಿಗೆ ಪೂಜಿಸುತ್ತ ಬಂದ ಒಂದು ಕುಟುಂಬವೂ ಸಹ ಶ್ರೀಮದುತ್ತರಾದಿ ಮಠದ ಶಿಷ್ಯಪರಂಪರೆಯಲ್ಲಿ ಇಂದಿಗೂ ಇದೆ. ಅಷ್ಟೇ ಅಲ್ಲದೇ ಆ ಕುಟುಂಬದವರು ತಮ್ಮ ಸಂಸ್ಥಾನವನ್ನೇ ಶ್ರೀಮದುತ್ತರಾದಿ ಮಠದ ಶ್ರೀಸತ್ಯವೀರ ತೀರ್ಥರಿಗೆ ಒಪ್ಪಿಸಿದ ರಾಜಮನೆತನವು ಇಂದಿಗೂ ಐರಣಿಯಲ್ಲಿದೆ. ಮೂಲತಃ ಈ ಮನೆತನದವರು ವಿಜಾಪುರದ ಆದಿಲ್‌ಶಾಹಿ ಸಾಮ್ರಾಜ್ಯ ಕಾಲದಲ್ಲಿ ಹೆಸರಾಂತ ಸರದಾರರೆನಿಸಿಕೊಂಡವರು. ದೇಶಸ್ಥ ಋಗ್ವೇದಿ ಬ್ರಾಹ್ಮಣರೆಂದು ಗುರುತಿಸಲ್ಪಡುವವರು. ಈ ಮನೆತನದ ಮೂಲ ಪುರುಷನನ್ನು ಇತಿಹಾಸವು "ವೇದೋಜಿ ಭಾಸ್ಕರ" ಎಂದು ಗುರುತಿಸುವದುಂಟು. ಮುಂದೆ ಇವರು ತಮಿಳುನಾಡಿನಲ್ಲಿರುವ ಆರಣಿ ಜಹಗಿರ ಸಂಸ್ಥಾನಿಕರೆಂದು ಖ್ಯಾತರಾದರು. ಉದಾರಚರಿತೆಯಿಂದ ಕೂಡಿದ ಈ ಸಂಸ್ಥಾನವನ್ನೇ ಸೀತಮ್ಮನವರ ತವರು ಎಂದು ಶ್ರೀಮಠದ ಶಿಷ್ಯರು ಗುರುತಿಸತೊಡಗಿದರು.

ಶ್ರೀಮಠವು ಸಂಚಾರ ಮಾಡುತ್ತಾ ಒಂದು ಸಲ ಅರಣಿಗೆ ದಿಗ್ವಿಜಯ ಮಾಡಿಸಿತು. ಜಹಗೀರದಾರರ ಪುಟ್ಟ ಮಗು ಪಚ್ಚೆಯ ರಾಮದೇವರನ್ನಿಟ್ಟುಕೊಂಡು ಆಟವಾಡುತ್ತಿದ್ದನ್ನು ಗಮನಿಸಿದ ಗುರುಗಳು "ಮಗೂ ಈ ದೇವರನ್ನು ನಮಗೆ ಕೊಡುವೆಯಾ?" ಎಂದು ವಿನೋದವಾಗಿ ಕೇಳಿದರು. ಮುಗ್ಧ ಮನಸ್ಸಿನ ಆ ಮಗು ತಕ್ಷಣವೇ ಅದನ್ನು ಶ್ರೀಗಳವರ ಕೈಗೊಪ್ಪಿಸಿತು. ಪಕ್ಕದಲ್ಲಿಯೇ ನಿಂತು ಇದನ್ನೆಲ್ಲ ನೋಡುತ್ತಿದ್ದ

ಜಹಗೀರುದಾರರು ಪಚ್ಚದ ಆ ರಾಮದೇವನ ವಿಗ್ರಹವನ್ನು ಧಾರಾಪೂರ್ವಕವಾಗಿ ಶ್ರೀಗಳವರಿಗೆ ದಾನ ಮಾಡಿದರು. ಆ ವಿಗ್ರಹವು ಇಂದಿಗೂ ಬಂಗಾರ ಹಾಗೂ ವಜ್ರ ಮಂಟಪಗಳಲ್ಲಿ ಗರುಡನ ಮೇಲೆ ಕಂಗೊಳಿಸುತ್ತಲಿದೆ. ಅದರ ಬೆಲೆಯನ್ನು ಶ್ರೀರಾಮನೇ ಬಲ್ಲ.

ಮೊಗಲ್ ಸಮ್ರಾಟರು ಗೋವಳಕೊಂಡ ಹಾಗೂ ಆದಿಲ್‌ಶಾಹಿ ರಾಜ್ಯದೊಂದಿಗೆ ಕೆಲವು ಕರಾರುಗಳನ್ನು ಮಾಡಿಕೊಂಡಾಗ ಮಹಾ ಪ್ರತಾಪಿಯಾದ ಅತ್ಯಂತ ಶೂರ ಸೇನಾನಿ ಎಂದೆನಿಸಿಕೊಂಡಿದ್ದ ಶಹಾಜೀ ರಾಜೇ ಭೋಸ್ಲೆ ಈತನನ್ನು ಇ.ಸ. 1658ರಲ್ಲಿ ದಕ್ಷಿಣ ಭಾಗದ ಸುಬೇದಾರನೆಂದು ನಿಯಮಿಸಿ, ಬೆಂಗಳೂರು, ಕೋಲಾರ ಎರಡೂ ಜಿಲ್ಲೆಗಳನ್ನು ಜಹಗೀರಿಯಾಗಿ ಕೊಟ್ಟು ಕಳುಹಿಸಿದರು. ಈತನು ಬೆಂಗಳೂರನ್ನು ತನ್ನ ಕೇಂದ್ರವನ್ನಾಗಿ ಮಾಡಿಕೊಂಡನು. ಈತನೊಂದಿಗೆ ವಿಜಾಪುರದ ಇನ್ನೊಬ್ಬ ಸರದಾರನಾದ ವೇದೋಜಿ ಬಾಸ್ಕರನಿಗೆ ಎಂಟು ಸಾವಿರ ಕಾಲ್ದಳ, ಆರು ಸಾವಿರ ಕುದುರೆ ಸವಾರರು, ಇಪ್ಪತ್ತು ಆನೆಗಳೊಂದಿಗೆ ವೆಲ್ಲೂರು, ಜಿಂಜಿ ಭಾಗಗಳನ್ನು ನೋಡಲು ನಿಯಮಿಸಿದರು. ಇವರಿಬ್ಬರೊಂದಿಗೆ ಮನಗೂಳಿಯ ಕಠಾವಿ ಮನೆತನದ ರಾಘೋ ಪಂಡಿತನೂ ಇದ್ದನು. ದಕ್ಷಿಣ ಭಾಗದ ಮುಜುಂದಾರಿಕೆಯನ್ನು ರಘುನಾಥ ಹನುಮಂತೆಯವರು ನಿರ್ವಹಿಸುತ್ತಿದ್ದರು. ಇವರೆಲ್ಲರೂ ಶ್ರೀಮದುತ್ತರಾದಿ ಮಠದ ಶಿಷ್ಯರೆಂಬ ಮಾತು ಬಹು ಮಹತ್ವದ್ದಾಗಿರುವದು.

ಶಹಾಜಿ ರಾಜನ ಆಸ್ಥಾನ ಕವಿಯಾದ ಕವೀಂದ್ರ ಪರಮಾನಂದನಿಂದ ರಚಿತವಾದ ಕಾವ್ಯದಲ್ಲಿ ಹಾಗೂ ತಂಜಾವೂರಿನಲ್ಲಿರುವ ಬೃಹದೇಶ್ವರ ದೇವಸ್ಥಾನದಲ್ಲಿ ಕೊರೆಯಲಾಗಿರುವ ಶಿಲಾಶಾಸನಗಳಲ್ಲಿ ವೇದೋಜಿ ಭಾಸ್ಕರರಾಯನ ವಿಚಾರವಾಗಿ ಸಾಕಷ್ಟು ಮಾಹಿತಿಗಳು ದೊರೆಯುವವು. ಈತನು ಸಂಸ್ಕೃತ ಪ್ರೇಮಿಯಾಗಿದ್ದು ವೇದಾಂತದಲ್ಲಿ ತುಂಬಾ ಆಸಕ್ತಿಯುಳ್ಳವನಾಗಿದ್ದನು. ಮಹಾ ಶೂರನೂ ಪ್ರತಾಪಿಯೂ ಆಗಿದ್ದನೆಂದು ವರ್ಣಿಸಲಾಗಿರುವದು.

ವೇದೋಜಿ ಭಾಸ್ಕರರಾಯನಿಗೆ ಎಂಟು ಜನ ಗಂಡು ಮಕ್ಕಳಿದ್ದರೆಂದು ತೋರುವದು. ಕಾಲಾಂತರದಲ್ಲಿ ರಾಜಾರಾಮನು ಜಿಂಜೀ ಕೋಟೆಯ ಆಶ್ರಯಕ್ಕೆ ಬಂದಾಗ ಮೊಗಲ್ ಸೇನಾನಿಯಾದ ಝುಲ್ಫಿಕರ್ ಖಾನ್ ಜಿಂಜಿಯ ಕೋಟೆಯನ್ನು ಮುತ್ತಿದನು. ಮುಂದೆ 1687ರಲ್ಲಿ ಮೊಗಲರು ಆರಣೀ ಕೋಟೆಯನ್ನು ವೇದೋಜಿ ಮನೆತನಕ್ಕೆ ಜಹಗೀರಿಯ ಸನದು ಮಾಡಿಕೊಟ್ಟಿರುವುದಾಗಿ ತಿಳಿದು ಬರುವದು.

ಈ ಸಂಸ್ಥಾನಿಕರಿಂದ ಶ್ರೀಮದುತ್ತರಾದಿ ಮಠದ ಶ್ರೀ ಸತ್ಯವಿಜಯತೀರ್ಥರು (ಇ.ಸ. 1726) ಶ್ರೀ ಸತ್ಯಪ್ರಿಯತೀರ್ಥರು (ಇ.ಸ. 1737 ರಿಂದ 1744) ಇವರಿಬ್ಬರ ಕಾಲದಲ್ಲಿ ಆರಣೀ ಮನೆತನದವರಿಂದಾದ ಸೇವೆ ಸುವರ್ಣಾಕ್ಷರಗಳಿಂದ ಬರೆದಿಡುವಂತಹದು. ತಂಜಾವೂರಿನ ಘನಶ್ಯಾಮ ಪಂಡಿತನಿಂದ ರಚಿತವಾದ 'ಪ್ರಚಂಡ ರಾಹೋದಯ' ಎಂಬ ನಾಟಕವಂತೂ ಅಭ್ಯಾಸಿಗಳಿಗೆ ಆಕರ ಗ್ರಂಥವಾಗಿರುವದು.

ಹಿಸ್ಟ್ರೀ ಆಫ್ ಹಿಂದೂಸ್ತಾನ್ ಎಂಬ ಗ್ರಂಥದ ಆಂಗ್ಲ ಲೇಖಕನು ಆರಣಿ ಜಹಗೀರದಾರರ ಧರ್ಮ ಶ್ರದ್ಧೆ, ಪ್ರಜಾವಾತ್ಸಲ್ಯತೆಯನ್ನು ಬಾಯ್ತುಂಬಾ ಹೊಗಳಿರುವನು. ಮುಂದೆ ಕಂಪನೀ ಸರಕಾರವು 11ರ ಮಾರ್ಚ್ 1784ರಲ್ಲಿ ಮಾಡಿಕೊಂಡ ಒಪ್ಪಂದದಂತೆ ಈ ಜಹಗೀರಿಯು ಆಂಗ್ಲರ ಅಧೀನಕ್ಕೊಳಪಡುವಂತಾಯಿತು.

ವೇದೋಜಿ ಬಾಸ್ಕರರಾಯನ ಈ ಕುಟುಂಬದವರು ಐ.ಎ.ಎಸ್. ಐ.ಎಫ್.ಎಸ್. ಅಧಿಕಾರಿಗಳಾಗಿ ಕೇಂದ್ರದಲ್ಲಿ ಅನೇಕ ಇಲಾಖೆಗಳಲ್ಲಿ ಕಾರ್ಯದರ್ಶಿಗಳಾಗಿಯೂ ವಿದೇಶದಲ್ಲಿ ಭಾರತದ ಪ್ರತಿನಿಧಿಗಳಾಗಿಯೂ ಸೇವೆ ಸಲ್ಲಿಸುತ್ತ ಬಂದಿರುವರು.

ಒಂದು ಕಾಲದಲ್ಲಿ ವಿಜಾಪುರದಿಂದ ಹೊರಟ ಈ ಮನೆತನವು ಇಂದಿಗೂ ಆರಣಿ ಜಹಗೀರದಾರರೆಂದೂ, ಶ್ರೀಮದುತ್ತರಾದಿ ಮಠದ ಶ್ರೇಷ್ಠ ಶಿಷ್ಯ ಪರಂಪರೆಯ ಶಿಷ್ಯರೆಂದೂ ಅರಮನೆ ಗುರುಮನೆಗಳಲ್ಲಿ ಮಾನ್ಯರಾಗಿರುವದು ಹೆಮ್ಮೆಯ ವಿಷಯವೆನಿಸುವದು.

# ಕೊಲ್ಲೂರಿನ ಮೂಕಾಂಬಿಕಾ

ಮಾತೃಸ್ಥಾನಕ್ಕೆ ಭಾರತದ ಪ್ರಾಚೀನ ಸಾಹಿತ್ಯವೆನಿಸಿದ ವೇದಗಳಲ್ಲಿ ವಿಶೇಷ ಮಹತ್ವದ ಸ್ಥಾನವನ್ನೀಯಲಾಗಿದೆ. ಮಾತೃಮರ್ಯಾದೆಯು ಶಾಕ್ತ ಸಂಪ್ರದಾಯದ ಮೂಲಾಧಾರ. ಇದರಲ್ಲಿ ದಕ್ಷಿಣ ಹಾಗೂ ವಾಮಾಚಾರಗಳೆಂದು ಎರಡು ಭಾಗಗಳಿವೆ. ಮೊದಲನೆಯದು ವೇದ ಪುರಾಣಾವಲಂಬಿಯಾದರೆ, ಎರಡನೆಯದು ಶಿವನಿಗಿಂತ ಶಕ್ತಿ ಪ್ರಾಧಾನ್ಯತೆಗೆ ವಿಶ್ವಾಸ ಹೊಂದಿರುವುದು. (ಶಕ್ತಿ : ಪ್ರಾಧ್ಯಾನಂ ಸರ್ವದಾ ಪರಿಕೀರ್ತನಾ) ಶಿವ ಶಕ್ತಿ ಇವರಲ್ಲಿ ಪರಸ್ಪರ ಅವಿನಾಭಾವ ಸಂಬಂಧ ಸೂಚಕ. ಕೇನೋಪನಿಷತ್ತಿನಲ್ಲಿ ಹೈಮವತಿ ಉಮೆಯು ಇಂದ್ರನಿಗೆ ಅರಿವು ಮೂಡಿಸಿದ ಪ್ರಸಂಗವಿದೆ. ವಾಜಪೇಯಿ ಸಂಹಿತಾ, ಅರಣ್ಯಕ, ತೈತ್ತರೀಯ ಬ್ರಾಹ್ಮಣ ಮೊದಲಾದವುಗಳಲ್ಲಿ ಶಕ್ತಿಯನ್ನು ಜಗನ್ಮಾತ, ದುರ್ಗಾ ವೈರೋಚನಿ, ಕನ್ಯಾಕುಮಾರಿ ಮೊದಲಾದ ಹೆಸರುಗಳಿಂದ ಕರೆಯಲಾಗಿದೆ. ದೇವಿಯ ಅನುಗ್ರಹವಾದಲ್ಲಿ ಅವಳು ಅನ್ನಪೂರ್ಣೆ ಹಾಗೂ ಕಲ್ಯಾಣಿ ಎಂದೆನಿಸುತ್ತಾಳೆ. ಮುನಿದಲ್ಲಿ ಕಾಳಿ, ಭೀಮ, ದಂಡಿನಿ ಎಂದೆನಿಸಿಕೊಳ್ಳುತ್ತಾಳೆ. ಮಾನವನ ಸುಖ ದುಃಖಗಳೆರಡರಲ್ಲಿಯೂ ಮಾತೃದೇವೋಭವ ಎಂದು ಶರಣು ಹೋಗುವುದು ಸ್ವಾಭಾವಿಕ.

ಮಾರ್ಕಂಡೇಯ ಪುರಾಣ, ದೇವೀ ಭಾಗವತಗಳಲ್ಲಿ ಮಹಾಲಕ್ಷ್ಮೀದೇವಿಯನ್ನು ಗುಪ್ತರೂಪಳೆಂದು ಹೇಳಲಾಗಿದೆ. ಅವಳ ಸಾತ್ವಿಕ ಅವಿರ್ಭಾವವು ಸರಸ್ವತಿ ಎಂದು ತಾಮಸ ರೂಪವನ್ನು ಕಾಳಿ ಎಂದು ವರ್ಣಿಸಲಾಗಿದೆ. ಈ ದೇವಿಯು ಅಷ್ಟಾದಶ ಭುಜಗಳಲ್ಲಿ ಕಮಲ, ಶ್ರೀಫಲ,

ಶಂಖ, ಅಮೃತ ಘಟ, ಮಾತುಲಿಂಗ, ಖೇಟಕ, ಗದಾ ಮೊದಲಾದ ಆಯುಧಗಳನ್ನು ಧರಿಸಿದವಳು. ಸೌಭಾಗ್ಯ ಚಿಹ್ನೆಯಾದ ಕಮಲವು ಇವಳಿಗೆ ಬಹು ಪ್ರಿಯವಾದುದು.

ಶತಪಥ ಬ್ರಾಹ್ಮಣ ಸಾಂಖ್ಯಾಯನ ಸೂತ್ರ ಮೊದಲಾದವುಗಳಲ್ಲಿ ಇವಳು ಬಂಗಾರದಂತಹ ಮೈಕಾಂತಿಯವಳು. ಸೊಗಸಾದ ಜಿಂಕೆಯಂತಹ ರೂಪ ಧರಿಸಿದವಳು. ಬೆಳ್ಳಿಬಂಗಾರಗಳ ಆಭರಣ ಧರಿಸಿ ಚಂದ್ರನಂತೆ ಕಂಗೊಳಿಸುವವಳು ಎಂದೆಲ್ಲ ವರ್ಣಿಸಿ, ಇವಳು ಕೃಷಿ ಪ್ರಾಧಾನ್ಯ ದೇವತೆಯಾಗಿದ್ದು ಗುಪ್ತರ ಕಾಲದಲ್ಲಿ ಇವಳನ್ನು ದೇವಶಿರಿ ಹಾಗೂ ಶಿರಿದೇವತಾ ಎಂದು ಕರೆಯಲಾಗಿದ್ದು, ಸಂಪತ್ತಿಗೆ ಅಭಿಮಾನಿಯಾದ ದೇವತೆ ಎಂದೆಲ್ಲ ಹೇಳಲಾಗಿದೆ.

ಭಾರತದ ಉದ್ದಗಲದಲ್ಲಿ ಅನೇಕ ಶಕ್ತಿಪೀಠಗಳಿವೆ. ಅವುಗಳಲ್ಲಿ ನಮ್ಮ ನಾಡಿನಲ್ಲಿ ಸವದತ್ತಿಯ ಎಲ್ಲಮ್ಮ, ಬಾದಾಮಿಯ ಬನಶಂಕರಿ, ಮೈಸೂರಿನ ಚಾಮುಂಡಿ, ಶಿರಸಿಯ ಮಾರಿಕಾಂಬಾ, ಕೊಲ್ಲೂರು ಮೂಕಾಂಬಿಕೆ, ಹುಲಗಿಯ ಹುಲಿಗೆಮ್ಮ ಮೊದಲಾದ ಸ್ತ್ರೀ ದೇವತೆಯರು ಶಕ್ತಿ ದೇವತೆಗಳೆಂದು ಕರೆಸಿಕೊಳ್ಳುತ್ತಾರೆ. ಅದರಲ್ಲಿ ಪಶ್ಚಿಮ ಘಟ್ಟದ ಕುಟಚಾದ್ರಿ ಪರ್ವತವಂತೂ ಅನೇಕ ವನಸ್ಪತಿಗಳಿಂದ ಕೂಡಿದ ತಾಣವಾಗಿದೆ. ಗಿರಿಕಂದರಗಳಲ್ಲಿ ಮನೋಹರವಾಗಿ ಹರಿದು ಬರುವ ಸೌಪರ್ಣಿಕಾ ಎಂಬ ನದಿಯ ತೀರದಲ್ಲಿ ಆದಿಪರಾಶಕ್ತಿ ರೂಪಿಣಿಯಾಗಿ ಶ್ರೀಚಕ್ರದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರೊಂದಿಗೆ ಶ್ರೀ, ಭೂ, ದುರ್ಗಾ ರೂಪದಲ್ಲಿ ಜ್ಯೋತಿರ್ಮಯರೂಪದಲ್ಲಿ ವಿರಾಜಮಾನಳಾಗಿದ್ದಾಳೆಂಬ ನಂಬಿಕೆ ನಮ್ಮದಾಗಿದೆ. ಈ ಮಾತನ್ನು ಶಂಕರನೇ ತನ್ನ ಮಗನಾದ ಸ್ಕಂದನಿಗೂ, ಸೂತರು ಶೌನಕಾದಿ ಮುನಿಗಳಿಗೂ ಕಥಾ ರೂಪದಲ್ಲಿ ಹೇಳಿದ್ದಾರೆ. ಸ್ಕಂದ ಪುರಾಣವೂ ಈ ಮಾತಿಗೆ ಪುಷ್ಟಿಯನ್ನೀಯುತ್ತದೆ.

ಕುಟಚಾದ್ರಿ ಪರ್ವತದಲ್ಲಿ ಕೋಲನೆಂಬ ತಾಪಸಿಯು ವಾಸಿಸುತ್ತಿದ್ದ.

ಆತನ ತಪಸ್ಸಿಗೆ ಕಂಹಾಸುರನೆಂಬ ದೈತ್ಯನಿಂದ ಬಾಧೆಯಾಯಿತು. ಆ ದೈತ್ಯನ ಬಾಧೆಯನ್ನು ಆದಿಶಕ್ತಿ ಮಾತೆ ಭೈರವಿಯ ರೂಪ ತಾಳಿ ನಿವಾರಿಸಿದಳು. ಕೋಲಮುನಿಯು ಈ ಸ್ಥಳಕ್ಕೆ ತನ್ನ ಹೆಸರಿಡುವಂತಾಗಲೆಂದು ಮಹಾದೇವನಿಂದ ವರ ಪಡೆದುಕೊಂಡನು. ಪರಮೇಶ್ವರನ ಅನುಗ್ರಹದಿಂದ ಆ ಸ್ಥಳವು ಕೊಲಾಪುರವೆಂದೆನಿಸಿಕೊಂಡಿತು. ಕಾಲಾಂತರದಲ್ಲಿ ಅದೇ ಸ್ಥಾನವನ್ನು ಕೊಲ್ಲೂರು ಎಂಬುದಾಗಿ ಜನರ ಬಳಕೆಯಲ್ಲಿ ಆ ಗ್ರಾಮದ ಹೆಸರು ರೂಢಿಯಲ್ಲಿ ಬರುವಂತಾಯಿತು.

ಕೋಲ ಮಹರ್ಷಿಯ ತಪವನ್ನು ಭಂಗ ಮಾಡಿದ ಕಂಹಾಸುರನು ಆ ಸ್ಥಳವನ್ನು ತನ್ನದಾಗಿ ಮಾಡಿಕೊಳ್ಳಲು ತಪಗೈದಾಗ ಪ್ರತ್ಯಕ್ಷನಾದ ಪರಮೇಶ್ವರನ ಮುಂದೆ ಆತನ ನಾಲಿಗೆಯು ನುಡಿಯದಂತೆ ಮಾಡಿದ ಆ ದೇವಿಯನ್ನು ಮೂಕಾಂಬಿಕೆಯೆಂದು ಕರೆಯತೊಡಗಿದರೆಂದು ಪುರಾಣಗಳು ಹೇಳುತ್ತವೆ. ಅದೇ ರೀತಿಯಲ್ಲಿ ಇನ್ನೊಂದು ಸಂದರ್ಭವನ್ನು ಉದಾಹರಿಸುವುದುಂಟು. ಕಾಲಡಿಯಿಂದ ಆದ್ಯಶಂಕರ ಭಗವತ್ಪಾದರು ಈ ಕ್ಷೇತ್ರಕ್ಕೆ ದಯಮಾಡಿಸಿದಾಗ ಹುಟ್ಟು ಮೂಕನಾದ ಮಗನೊಂದಿಗೆ ಬಂದಿದ್ದ ದಂಪತಿಗಳು ಪೂಜ್ಯರ ಪಾದಗಳಲ್ಲಿ ತಮ್ಮ ಮಗನನ್ನು ಹಾಕಿ ಆತನಿಗೆ ಅನುಗ್ರಹಿಸಬೇಕೆಂದು ಕೇಳಿಕೊಂಡರು. ಶಂಕರ ಭಗವತ್ಪಾದರು ತಾಯಿ ಮೂಕಾಂಬಿಕೆಯನ್ನು ಸ್ಮರಿಸಿ ಆತನ ತಲೆಯ ಮೇಲೆ ವರದ ಹಸ್ತವನ್ನಿಟ್ಟರು. ಪೂರ್ವ ಸುಕೃತವೆಂಬಂತೆ ಆತನ ಮುಖದಿಂದ ಚತುರ್ವೇದಗಳು ಹೊರಹೊಮ್ಮಿದವು. ದೈವೀ ಸಂಪದ್ಯುಕ್ತನಾದ ಆತನಿಗೆ ಪೂಜ್ಯರು ಆಶ್ರಮವನ್ನಿತ್ತು ಹಸ್ತಾಮಲಕರೆಂದು ನಾಮಕರಣ ಮಾಡಿದರು. ಇವರು ಕುಟಚಾದ್ರಿಯ ಸರ್ವಜ್ಞಪೀಠ ಹಾಗೂ ಚಿತ್ರಮೂಲ ಸ್ಥಳಗಳಲ್ಲಿದ್ದು ತಪಗೈದರೆಂಬ ಐತಿಹ್ಯವಿದೆ. ಈ ಮಹಾನುಭಾವರಿಗೆ ಜಗನ್ಮಾತೆ ಅನೇಕ ಸಲ ದರ್ಶನವನ್ನಿತ್ತಳೆಂದು ತಿಳಿದುಬರುವುದು.

ಶ್ರೀ ಶಂಕರ ಭಗವತ್ಪಾದರು ಶ್ರೀ ಚಕ್ರದ ಮಧ್ಯಬಿಂದುವಿನಂತಿರುವ ಜ್ಯೋತಿರ್ಮಯ ಲಿಂಗದ ಹಿಂಭಾಗದಲ್ಲಿ. ಕುಳಿತು ಧ್ಯಾನಾಸಕ್ತರಾಗುವುದು

ವಾಡಿಕೆಯಾಗಿತ್ತು. ಕಾಲಾಂತರದಲ್ಲಿ ಅದೇ ಸ್ಥಳದಲ್ಲಿ ಸಿಂಹವಾಹಿನಿಯಾದ ಶಕ್ತಿ ದೇವತೆಯನ್ನು ಪಂಚಲೋಹದ ವಿಗ್ರಹದಲ್ಲಿಟ್ಟು ಪೂಜಿಸುವಂತೆ ವ್ಯವಸ್ಥೆ ಮಾಡಿದರು. ಪೂಜ್ಯಪಾದರು ತಪೋನಿರತರಾದ ಸ್ಥಳದಲ್ಲಿ ನವಾಕ್ಷರಿ ಕಲಶ ಪ್ರತಿಷ್ಠಾಪನೆ ಮಾಡಿದ ನಂತರವೇ ಈ ಕ್ಷೇತ್ರದಲ್ಲಿ ಶರನ್ನವರಾತ್ರಿಯ ಉತ್ಸವಗಳು ಆರಂಭವಾಗುವವು. ಈ ಉತ್ಸವಗಳಲ್ಲಿ ಮೂಲಾ ನಕ್ಷತ್ರ ಅಷ್ಟಮಿಯ ದಿನ ದುರ್ಗಾಪೂಜೆಯೊಂದಿಗೆ ಚಂಡೀ ಯಾಗವೂ ನಡೆಯುವುದುಂಟು.

*ಕೊಲ್ಲೂರು ಚಕ್ರಾಂಕಿತ ಮಧ್ಯ ನಿಲಯಾಂ*
*ಪೀತಾಂಬರಾಲಂಕೃತಾಂ।*
*ಶಂಖಚಕ್ರವರಾಭಯಾಂ ಚ ದಧತೀಂ*
*ಬಾಲೇಂದು ಮೌಲೀಂ ಶುಭಾಂ॥*

*ಸಿಂಹಸ್ಯೋಪರಿ ಸಂಸ್ಥಿತಾಂ ತ್ರಿನಯನಾಂ*
*ಮೂಕಾಸುರಚ್ಛೇದಿನೀಂ।*
*ಶ್ರೀ ಕೋಲಾಪುರ ವಾಸಿನೀಂ ಭಗವತೀಂ*
*ಧ್ಯಾಯಾಮಿ ಮೂಕಾಂಬಿಕಾಂ॥*

ಈ ದೇವಿಯ ಭಕ್ತರಲ್ಲಿ ಕೇರಳದವರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಶ್ರೀ ಶಂಕರ ಭಗತ್ಪಾದರಿಂದ ಪೂಜಿತಳು. ಅವರ ಹಸ್ತದಿಂದಲೇ ಪಂಚಲೋಹದ ದುರ್ಗಾಮೂರ್ತಿ ಪ್ರತಿಷ್ಠಾಪಿತವಾದುದು. ಅಲ್ಲದೆ ಆ ಚಕ್ರದ ಮಧ್ಯದಲ್ಲಿ ಜ್ಯೋತಿರ್ಮಯ ರೂಪದಲ್ಲಿ ವಿರಾಜಮಾನಳಾದವಳು. ಈ ಎಲ್ಲ ಕಾರಣಗಳಿಂದ ಶಕ್ತಿ ದೇವತೆಯ ಆರಾಧಕರಿಗೆಲ್ಲ ಈ ಕ್ಷೇತ್ರವು ಬಹು ಆಕರ್ಷಣೀಯವಾದ ಸಿದ್ಧಿಸ್ಥಳವೆನಿಸಿಕೊಂಡಿರುವುದು. ಪ್ರತಿ ಅಮಾವಾಸ್ಯಾ ಪರ್ವಕಾಲ ಹಾಗೂ ಗ್ರಹಣ ಕಾಲದಲ್ಲಿ ಕೇರಳದ ಯಾತ್ರಿಕರು ಹೆಚ್ಚಿನ ಸಂಖ್ಯೆಯಲ್ಲಿ ಕೊಲ್ಲೂರಿಗೆ ಬಂದು ಹೋಗುತ್ತಾರೆ. ನಮ್ಮ ನಾಡಿನ ಕೆಳದಿಯ ಅರಸರು, ಮೈಸೂರಿನ ಯದುವಂಶೀಯರು, ಕರಾವಳಿ ತೀರದ ಬಲ್ಲಾಳರು ಧನಕನಕಾದಿ ರೂಪಗಳಿಂದ ನಾನಾ ರೀತಿಯಲ್ಲಿ ಈ

ದೇವಿಯ ಸೇವೆ ಮಾಡಿದ್ದಾರೆ. ದೇವಸ್ಥಾನದ ಅನೇಕ ಪ್ರಾಕಾರಗಳನ್ನು ನಿರ್ಮಿಸಿದ್ದಾರೆ.

ಇತ್ತೀಚೆಗೆ 1992ರಲ್ಲಿ ಮೂಕಾಂಬಿಕಾ ದೇವಾಲಯದ ಮಹಾದ್ವಾರವು ಅತಿ ಪುರಾತನವಾದುದರಿಂದ ಅದನ್ನು ತೆಗೆದು ಹಾಕಿ ಸಿಮೆಂಟ್ ಕಾಂಕ್ರೀಟಿನಲ್ಲಿ ನೂತನ ರಾಜಗೋಪುರದ ಕಾರ್ಯವು ಆರಂಭವಾದಾಗ ಸಂಪ್ರದಾಯವಾದಿಗಳು ಆಧುನೀಕರಣದ ಈ ಪ್ರಯೋಗವನ್ನು ವಿರೋಧಿಸಿ ನ್ಯಾಯಾಲಯದ ಕಟ್ಟೆ ಹತ್ತಿ ಆ ಕಾರ್ಯವನ್ನು ನಿಲ್ಲಿಸಿದರು. ನ್ಯಾಯಾಲಯವು ಮೊದಲು ತಜ್ಞರಿಂದ ಪರೀಕ್ಷೆ ನಡೆಸಿ 1996ರಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯದ ಪ್ರಧಾನ ನ್ಯಾಯಾಧೀಶರಾಗಿದ್ದ ಶ್ರೀ ಎಂ.ವಿ. ವೆಂಕಟಾಚಲಯ್ಯನವರು, ಧರ್ಮಸ್ಥಲದ ಧರ್ಮಾಧಿಕಾರಿಗಳಾದ ಶ್ರೀ ವೀರೇಂದ್ರಹೆಗಡೆಯವರು, ಭಾರತದ ಪ್ರಾಚ್ಯ ವಸ್ತು ಸಂಶೋಧನಾಲಯದ ಹಿರಿಯ ಅಧಿಕಾರಿಗಳಾಗಿ ನಿವೃತ್ತರಾದ ಡಾ. ಎಸ್. ಆರ್. ರಾವ್ ಅವರು ಹಾಗೂ ರಾಜ್ಯ ಸರಕಾರದ ಇಂಜಿನಿಯರರಾದ ಶ್ರೀ ರತ್ನಾಕರ ಶೆಟ್ಟಿ ಮತ್ತು ಕೊಲ್ಲೂರು ಮೂಕಾಂಬಿಕಾ ದೇವಾಲಯದ ಸಂಚಾಲಕರಾದ ಶ್ರೀ ಅಪ್ಪಣ್ಣ ಹೆಗಡೆಯವರು, ಪ್ರಸಿದ್ಧ ಸ್ಥಪತಿಗಳಾದ ಕೇರಳದ ವಿ.ಬಿ. ನಂಬೂದ್ರಿ ಪಾದರನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿ ದೇವಾಲಯದ ರಾಜಗೋಪುರದ ನಿರ್ಮಾಣ ಕಾರ್ಯವನ್ನು ಈ ಸಮಿತಿಗೆ ಒಪ್ಪಿಸಿದರು.

ಸಮಿತಿಯು ಈ ಗೋಪುರದ ಕಾರ್ಯ ನಿರ್ವಹಣೆಗಾಗಿ ಭಾರತದ ಪ್ರಾಚ್ಯ ಸಂಶೋಧನಾ ಇಲಾಖೆಯಲ್ಲಿ ಇಂಜಿನಿಯರರಾಗಿ ದೇಶ ವಿದೇಶಗಳಲ್ಲಿ ಒಳ್ಳೇ ಹೆಸರು ಸಂಪಾದಿಸಿದ್ದ ಶ್ರೀ ಎಂ.ಎಂ. ರಾಯಚೂರು ಇವರಿಗೆ ಗೋಪುರ ನಿರ್ಮಾಣ ಕಾರ್ಯದ ಸಂಪೂರ್ಣ ಕೆಲಸದ ಭಾರವನ್ನು ಒಪ್ಪಿಸಿದರು. ಬೆಂಗಳೂರಿಗೆ ಸಮೀಪದಲ್ಲಿರುವ ಸಾದಹಳ್ಳಿಯಲ್ಲಿರುವ ಗಣಿಯಿಂದ ಕಲ್ಲನ್ನು ಪೂರೈಸಿ, ತಳಪಾಯವನ್ನೆಲ್ಲ ಅದೇ ಕಲ್ಲಿನಿಂದ ನಿರ್ಮಿಸಿ ಆನಂತರ ಪ್ರತಿ ಹಂತದಲ್ಲಿ ಮರದಿಂದ ಮಂಟಪಗಳನ್ನು ರಚಿಸಿಕೊಂಡು

ಗೋಪುರ ಕಾರ್ಯವನ್ನು ಪೂರ್ಣಗೊಳಿಸುವುದೆಂದು ನಿರ್ಧಾರಮಾಡಿ ಕೆಲಸವನ್ನಾರಂಭಿಸಿದರು. ಈ ಕಾರ್ಯಕ್ಕಾಗಿ ಒಂದು ಕೋಟಿ ಐದು ಲಕ್ಷ ರೂಪಾಯಿಗಳಷ್ಟು ಹಣವು ಖರ್ಚಾಗಬಹುದೆಂದು ಅಂದಾಜು ಮಾಡಲಾಗಿರುವುದು. ಮದ್ರಾಸ್‌ನಿಂದ ಬಂದ ಕೆಲಸಗಾರರು ಶ್ರದ್ಧಾ ಭಕ್ತಿಯೊಂದಿಗೆ ಭರದಿಂದ ತಮ್ಮ ಕೆಲಸದಲ್ಲಿ ನಿರತರಾಗಿರುವರು.

ಒಂದು ಬೃಹತ್ಕಾರ್ಯವನ್ನಾರಂಭಿಸಬೇಕಾದಲ್ಲಿ ದೇವಾಲಯದ ಅರ್ಚಕರು, ಸೇವಕರು, ಭಕ್ತಾದಿಗಳು ಹಾಗೂ ಸರಕಾರದ ನೆರವು ಬಹು ಅಗತ್ಯ, ಕೊಲ್ಲೂರು ಮೂಕಾಂಬಿಕಾ ದೇವಾಲಯವು ರಾಜ್ಯದ ಧಾರ್ಮಿಕ ದತ್ತಿ ಆಯುಕ್ತರ ಅಧೀನದಲ್ಲಿರುವುದರಿಂದ ಇಲಾಖೆಯ ಮೇಲ್ವಿಚಾರಕರಾಗಿ ಸೇವೆ ಸಲ್ಲಿಸುತ್ತಿರುವುದರಿಂದ ಅಧಿಕಾರಿಗಳ ಸಹಾಯ ಹಾಗೂ ಸಹಕಾರಗಳು ಬಹು ಅಗತ್ಯ. ದೇವಿಯ ದರ್ಶನ ಹಾಗೂ ಸ್ಥಳಪರಿಶೀಲನೆ ಗೆಂದು ಹೋದಾಗ ಅಲ್ಲಿ ನಡೆಯುತ್ತಿರುವ ಕೆಲಸ ಕಾರ್ಯಗಳಿಗೆಲ್ಲ ಸ್ಥಾನೀಯ ಅಧಿಕಾರಿಗಳ ಅಡಚಣೆಯೇ ದೊಡ್ಡ ಸಮಸ್ಯೆಯಾದಂತೆ ಅಲ್ಲಿಯ ನಿವಾಸಿಗಳಿಂದ ತಿಳಿದು ಬಂದಿತು. ಈ ವಿಚಾರವನ್ನು ಕುರಿತು ಶ್ರೀ ಎಂ.ಎಂ. ರಾಯಚೂರು ಇವರನ್ನು ಸಂದರ್ಶಿಸಿದಾಗ ಎಂಥ ಅಡಚಣೆಗಳು ಬಂದರೂ ಸಹ ಅದನ್ನು ನಿವಾರಣೆ ಮಾಡಿಕೊಂಡು ಏಪ್ರಿಲ್ ತಿಂಗಳಲ್ಲಿ ನಡೆಯುವ ಮೂಕಾಂಬಿಕಾ ದೇವಿಯ ಜಾತ್ರೆಯೊಳಗಾಗಿ ಈ ಕಾರ್ಯವನ್ನು ಮುಗಿಸಿಯೇ ತೀರಬೇಕು ಎಂಬ ಸಂಕಲ್ಪವು ತಮ್ಮದಾಗಿದೆ ಎಂದು ಹೇಳಿ, ಭಗವತಿಯ ಅನುಗ್ರಹವೇ ನಮಗೆ ರಕ್ಷಾಕವಚವೆಂದು ಪ್ರಾಂಜಲಭಾವದಿಂದ ಹೇಳಿದರು. ಅವರ ಮಾತನ್ನಾಲಿಸಿದಾಗ ನೂತನ ರಾಜಗೋಪುರವನ್ನು ಭಕ್ತರು ಬಹು ಬೇಗನೆ ಕಾಣುವಂತಾಗುವುದರಲ್ಲಿ ಯಾವ ಸಂದೇಹವಿಲ್ಲ.

# ಇತಿಹಾಸದ ಹಿರಣ್ಯಗರ್ಭ

ಪ್ರಭು ನಗಾಧಿರಾಜನಾದ ಬದರೀ ನಾರಾಯಣನ ಸಾನ್ನಿಧ್ಯವನ್ನಾರಂಭಿಸಿ ಜಗನ್ಮಾತೆ ಕನ್ಯಾಕುಮಾರಿಯವರೆಗೆ ಹಾಗೂ ಪುರಿಯ ಜಗನ್ನಾಥದಿಂದ ಶ್ರೀಮತ್ಕೃಷ್ಣನ ದ್ವಾರಕಾ ನಗರದವರೆಗೆ ಶತಶತಮಾನಗಳಿಂದ ಏಕಪ್ರಕಾರವಾಗಿ ಸಂಚರಿಸುತ್ತ ದ್ವೈತದುಂದುಭಿಯನ್ನು ಮೊಳಗಿಸಿದ ಮಠವೇ ಶ್ರೀಮದುತ್ತರಾದಿ ಮಠವೆಂದೆನಿಸಿಕೊಳ್ಳುವುದು. ಹೀಗೆ ಭಾರತದುದ್ದಗಲಕ್ಕೆ ಶತಮಾನಗಳಿಂದ ಸಂಚರಿಸುತ್ತ ಬಂದ ಮಠವು ಬೇರೊಂದಿಲ್ಲ.

ಶ್ರೀಮದಾನಂದ ತೀರ್ಥರಿಂದ ಪ್ರಣೀತವಾದ ಪಂಚಭೇದ ತಾರತಮ್ಯೋಪೇತವಾದ ದರ್ಶನ ಶಾಸ್ತ್ರದ ಪ್ರಚಾರ ಮಾಡುವುದರೊಂದಿಗೆ ಶ್ರೀ ಮೂಲರಾಮ ದೇವನ ದರ್ಶನ ತಪ್ತ ಮುದ್ರಾಂಕಿತಗಳೊಂದಿಗೆ ಶಿಷ್ಯರನ್ನು ಉದ್ಧರಿಸುತ್ತ ಅವರಿಗೆ ಸನ್ಮಾರ್ಗ ದರ್ಶನ ಮಾಡಿಸುತ್ತ ಕಾಶಿ, ಕ್ಷೇತ್ರರಾಜ ಪ್ರಯಾಗ, ಗಯಾ ಮೊದಲಾದ ಪವಿತ್ರ ತೀರ್ಥ ಕ್ಷೇತ್ರಗಳಲ್ಲಿ ಶ್ರೀಮಠದ ಶಿಷ್ಯರ ಅನುಕೂಲಕ್ಕಾಗಿ ಶಾಖೆಗಳನ್ನಾರಂಭಿಸಿ ವಸತಿ ಸೌಕರ್ಯದೊಂದಿಗೆ ಗಯಾವಾಡರಿಗೆ ದೀಕ್ಷೆಯನ್ನಿತ್ತ ಏಕೈಕ ಮಠವೆಂದರೆ ಶ್ರೀಮದುತ್ತರಾದಿ ಮಠವೆನಿಸುವದು.

ಇಂದು ಸ್ವತಂತ್ರ ಭಾರತದ ಐವತ್ತು ವರುಷಗಳ ಕಾಲದಲ್ಲಿ ಈ ಪೀಠವನ್ನಲಂಕರಿಸಿ ಶಿಷ್ಯ ಪರಂಪರೆಯನ್ನು ಬೆಳೆಸಿ, ಕುವಾದಿಗಳಿಂದ ರಚಿತವಾದ ಗ್ರಂಥಗಳನ್ನೆಲ್ಲ ಖಂಡಿಸಿ ಮಂಡನ ಗ್ರಂಥಗಳನ್ನೊದಗಿಸಿದ ಕೀರ್ತಿಯು ಶ್ರೀ ಸತ್ಯಪ್ರಮೋದ ತೀರ್ಥರಿಗೆ ಸಲ್ಲುವದು. ಇಂದು ಬಾಹ್ಯ ಚಕ್ಷುಗಳಿಂದ ಅವರು ಕಣ್ಮರೆಯಾದಂತೆನಿಸಿದರೂ ಆ ಪೂಜ್ಯರು ಪೀಠಕ್ಕೆ

ಸಲ್ಲಿಸಿದ ಅಜರಾಮರವಾದ ಕೀರ್ತಿಯು ಪ್ರತಿ ಕ್ಷಣವೂ ನಮ್ಮ ಕಣ್ಮುಂದೆ ಕಾಣುವಂತಹದಾಗಿರುವದು.

ಬೆಂಗಳೂರಿನಲ್ಲಿರುವ ಶ್ರೀಮಠದಿಂದ ಒಂದು ಮಧ್ಯಾಹ್ನ ಅವಶ್ಯವಾಗಿ ಬರಲು ಅಪ್ಪಣೆಯ ಕರೆ ಬಂದಿತು. ಅಂದು ಪೂಜಾ ಮಂದಿರದಲ್ಲಿ ಮಹಾರಾಷ್ಟ್ರ, ಆಂಧ್ರ, ತಮಿಳುನಾಡು ಹಾಗೂ ಕರ್ನಾಟಕದ ಬಹು ಭಾಗಗಳಿಂದ ಆಗಮಿಸಿದ ಶಿಷ್ಯರ ಸಮೂಹವೇ ಅಲ್ಲಿ ಮಿಳಿತವಾಗಿತ್ತು. ಶ್ರೀ ಸತ್ಯಪ್ರಮೋದ ತೀರ್ಥರ ಕರಮಲ ಸಂಜಾತರಾದ ಶ್ರೀ ಸತ್ಯಾತ್ಮತೀರ್ಥರ ಆಗಮನಾ ನಂತರ ಎದ್ದು ನಿಂತು ಎಲ್ಲರೂ ಶ್ರೀಗಳವರಿಗೆ ವಂದಿಸಿದರು. ಅಂದು ಶ್ರೀಗಳವರ ಮುಖದಲ್ಲಿ ವೈರಾಗ್ಯದೊಂದಿಗೆ ವಿರಹದ ಭಾವವೂ ಕಾಣಬರುತ್ತಿತ್ತು.

''ನಮ್ಮ ಆತ್ಮೋದ್ಧಾರಕ ಗುರುಗಳು ಇಂದು ನಮ್ಮನ್ನು ಶ್ರೀರಾಮನಿಗೊಪ್ಪಿಸಿ ದೂರಾಗಿದ್ದಾರೆ. ಈ ವೇದಾಂತ ಸಾಮ್ರಾಜ್ಯದ ಭಾರವು ಸಾಮಾನ್ಯವಾದುದಲ್ಲ. ನಾವು ಇನ್ನೂ ಚಿಕ್ಕವರು. ನಮ್ಮನ್ನು ಆಚಾರ್ಯ ಮಧ್ವರೇ ಕೈಹಿಡಿದು ನಡೆಸಬೇಕಾಗಿದೆ. ನಮ್ಮ ಗುರುಗಳು ತಮ್ಮ ಐವತ್ತು ವರುಷಗಳ ದೀರ್ಘ ಕಾಲದಲ್ಲಿ ಪ್ರಾಚೀನ ಪರಂಪರೆಯಿಂದ ಬಂದಿದ್ದ ಶ್ರೀಮಠದ ಸ್ಥಿರಚರ ಆಸ್ತಿಯನ್ನು ಬಹು ಜೋಪಾನವಾಗಿ ರಕ್ಷಿಸಿಕೊಂಡು ಬಂದಿರುವರಲ್ಲದೆ ತಮ್ಮ ಕಾಲದಲ್ಲಿಯೂ ಸಹ ಶ್ರೀ ಮೂಲರಾಮ ದೇವರ ಭಂಡಾರವನ್ನು ಹೆಚ್ಚಾಗಿ ಬೆಳೆಸಿದ್ದಾರೆ. ಈ ಐವತ್ತು ವರುಷಗಳ ಕಾಲಾವಧಿಯಲ್ಲಿ ನಮ್ಮ ಗುರುಗಳು ಮಾಡಿದ ಚಿನ್ನ, ಬೆಳ್ಳಿ, ರತ್ನ, ಮುತ್ತು ಮೊದಲಾದುವುಗಳನ್ನೆಲ್ಲ ಈಗಾಗಲೇ ಯಾವುದನ್ನೂ ಬಿಡದಂತೆ ''ಪರಮಹಂಸ'' ಎಂಬ ಗ್ರಂಥ'ದಲ್ಲಿ ಭಾವಚಿತ್ರಗಳೊಂದಿಗೆ ವಿವರವನ್ನೀಯಲಾಗಿದೆ. ಆ ಗ್ರಂಥವು ಈಗ ಎಲ್ಲರ ಕೈಯಲ್ಲಿಯೂ ಇದೆ. ಇಂದು ನಾವು ಶ್ರೀಮಠದಲ್ಲಿ ಪರಂಪರಾಗತವಾಗಿ ರಕ್ಷಿಸಿಕೊಂಡು ಬಂದಿರುವ ಐನೂರು ವರುಷಗಳಿಗಿಂತ ಹಿಂದಿನದಾದ ಅಮೂಲ್ಯ ನಿಧಿಯನ್ನು ನಿಮ್ಮೆಲ್ಲರ

ಸನ್ನಿಧದಲ್ಲಿರಿಸಲು ಕರೆಸಿಕೊಂಡಿದ್ದೇವೆ. ಈ ಅಮೂಲ್ಯವಾದ ನಿಧಿಯೊಂದಿಗೆ ಶ್ರೀಮಠವು ಅಖಂಡ ಭಾರತದಲ್ಲಿ ಹೇಗೆ ಸಂಚಾರ ಮಾಡುತ್ತ ಬಂದಿದೆ ಎಂಬುದನ್ನು ಊಹಿಸುವದೇ ವಿಶೇಷದ ಮಾತಾಗಿದೆ''.

ವಿಜಯನಗರದ ಮಹಾ ಸಾಮ್ರಾಜ್ಯದ ಅರಸರು ದೇವನಿಗಿತ್ತ ಅಮೂಲ್ಯವಾದ ಆಭರಣಗಳಿವು ಎಂದು ಒಂದೊಂದಾಗಿ ಅವುಗಳನ್ನು ಹೊರತೆಗೆದು ಪ್ರತಿಯೊಬ್ಬರ ಕೈಗಳಲ್ಲಿ ಅದನ್ನು ನೋಡಲು ಕೊಡುವಂತೆ ಅಪ್ಪಣೆ ಮಾಡಿದರು. ಇದು ಮೈಸೂರಿನ ಮಹಾರಾಜರಿಂದ ಕೊಡಲ್ಪಟ್ಟ ರತ್ನದ ಹಾರ. ಇದನ್ನು ನೋಡಿರಿ. ಜಯಪುರದ ಮಹಾರಾಜರಿಂದ ಸಮರ್ಪಿತವಾದುದು. ಈ ಬಂಗಾರದ ಸೀತಮ್ಮನವರು ಹೆರಳು ಹಾಗೂ ಅಭಿಷೇಕದ ಗಿಂಡಿಗಳು ರೇವಾ ಮಹಾರಾಜರಿಂದ ದೇವಿಗೆ ಅರ್ಪಿತವಾದವುಗಳು. ಸವಣೂರಿನ ನವಾಬರು, ಹೈದರಾಬಾದಿನ ನವಾಬರು, ಸುರಪುರದ ದೊರೆಗಳು, ಕೊಲ್ಹಾಪುರದ ಅರಸರು, ಪುಣೆಯ ಶ್ರೀಮಂತ ಪೇಶ್ವೆಯವರು, ಅದರಲ್ಲಿಯೂ ವಿಶೇಷವಾಗಿ ಮಾಧವರಾವ್ ಪೇಶ್ವೆಯವರಿಂದ ಕೊಡಲ್ಪಟ್ಟ ರತ್ನದ ಹಾರ, ಮುತ್ತಿನ ಹಾರಗಳು, ಕೊನೆಯ ಬಾಜೀರಾಯನಿಂದ ಕೊಡಲ್ಪಟ್ಟ ಪೇಶ್ವೆ ಮನೆತನದ ಗೌರವಸೂಚಕವೆನಿಸಿದ ಬಂಗಾರದ ಶಿರಪೇಚ. ರೇವಾ ಮಹಾರಾಜರಿಂದ ಶ್ರೀರಾಮಚಂದ್ರನ ಪಟ್ಟದ ಆನೆಗೆ ಕೊಡಲ್ಪಟ್ಟ ಬಲಗಾಲಲ್ಲಿ ಧರಿಸಲಾಗುತ್ತಿದ್ದ ಬಂಗಾರದ ಭಾರವಾದ ಸರಪಳಿ, ಅರಿಣಿ ಮಹಾರಾಜರಿಂದ ಕೊಡಲ್ಪಟ್ಟ ಸಾವಿರ ತೊಲೆಯ ಬಂಗಾರದ ಕೊಳಗ, ಪ್ರಾತಃ ಸ್ಮರಣೀಯರಾದ ಶ್ರೀ ಸತ್ಯಬೋಧ ಸ್ವಾಮಿಗಳ ಕಾಲದ ಬಂಗಾರದ ನಾಣ್ಯ ಒಂದೇ ಎರಡೇ. ಬಂಗಾರದ ತೀರ್ಥದ ಥಾಲಿಗಳಂತೂ ಒಂದು ಕೈಯಿಂದ ಎತ್ತಲೂ ಸಾಧ್ಯವಾಗದಂತಹ ಭಾರವಾದವುಗಳು. ಹೀಗೆ ಸುಮಾರು ನಾಲ್ಕು ಗಂಟೆಗಳ ಕಾಲ ಹಿಂದಿನವರು ಶ್ರೀಮಠಕ್ಕೆ ಸಲ್ಲಿಸಿದ ವಸ್ತು ಒಡವೆಗಳನ್ನೆಲ್ಲ ಕ್ರಮಪ್ರಕಾರವಾಗಿ ನೊಂದಣಿ ಮಾಡಿಸದಂತೆ ಅವೆಲ್ಲವುಗಳನ್ನೂ ತೋರಿಸಿದರಲ್ಲದೆ ಶ್ರೀ ಸತ್ಯಪ್ರಮೋದರು ತಮ್ಮ ಜೀವಿತ ಕಾಲದಲ್ಲಿ ಶ್ರೀರಾಮಚಂದ್ರ ದೇವನಿಗೆ ಮಾಡಿಸಿದ ಅಮೂಲ್ಯವಾದ

ಪದಾರ್ಥಗಳನ್ನು ಬಿಡಿಬಿಡಿಸಿ ತೋರಿಸಿದರು. (ಇವೆಲ್ಲವೂ ಈಗಾಗಲೇ 'ಪರಮಹಂಸ'ದಲ್ಲಿ ಪ್ರಕಟಗೊಂಡಿವೆ).

ಆನಂದತೀರ್ಥರಿಂದ ಸ್ಥಾಪಿತವಾದ ಯಾವ ಪೀಠದಲ್ಲಿಯೂ ಇಷ್ಟೊಂದು ಸಂಪತ್ತನ್ನು ನಾವು ಕಾಣಲು ಸಾಧ್ಯವಿಲ್ಲವೆಂದೆನಿಸಿತು. ಇದರಲ್ಲಿ ಮಹತ್ವದ ಮಾತೆಂದರೆ ಭಾರತದಲ್ಲಿದ್ದ ರಾಜಮಹರಾಜರ ಸಂತತಿಯು ಇಂದು ಇಲ್ಲದಂತಾಗಿದೆ. ಆದರೆ ಅವರು ಈ ಪೀಠಕ್ಕೆ ಸಲ್ಲಿಸಿದ ಕಾಣಿಕೆಗಳು ಮಾತ್ರ ಶ್ರೀರಾಮನ ಸೇವೆಗಾಗಿ ಇಂದಿನವರೆಗೂ ಉಳಿದುಕೊಂಡು ಬಂದಿವೆ.

ಮಧ್ಯಯುಗೀನ ಭಾರತದ ಇತಿಹಾಸವನ್ನು ಅಭ್ಯಾಸ ಮಾಡುವ ಇತಿಹಾಸ ತಜ್ಞರಿಗೆ ಇಲ್ಲಿರುವ ಪದಾರ್ಥಗಳ ಅವಲೋಕನದಿಂದ ನಮ್ಮ ಪ್ರಾಚೀನರು ಎಷ್ಟು ಸನಾತನ ಸಂಪ್ರದಾಯ ಪ್ರಿಯರಾಗಿದ್ದರೆಂಬುದು ತಿಳಿದು ಬರುವದು. ಈಗಾಗಲೇ ಐದು ಲೇಖನಗಳಲ್ಲಿ ಶ್ರೀಮಠದ ವೈಭವವನ್ನು ವಿವರವಾಗಿ ವರ್ಣಿಸಿದ ಈ ಲೇಖಕನಿಗೆ ಪರಂಪರಾಗತವಾಗಿ ರಕ್ಷಿಸಿಕೊಂಡು ಬಂದ ಈ ಅಪಾರ ನಿಧಿಯನ್ನು ಕಂಡಾಗ ಇತಿಹಾಸದ ಮೇಲೆ ಗಾಢವಾದ ನಂಬಿಕೆ, ವಿಶ್ವಾಸಗಳು ಬೆಳೆದು ಬರಲು ಮಹಾ ಸಾಕ್ಷೀಭೂತವಾದ ನಿದರ್ಶನವು ಕಾಣಬಂದಿತು.

ಆದಿಲ್‌ಶಾಹೀ ಸಾಮ್ರಾಜ್ಯದ ದಕ್ಷಿಣದ ಮುಜುಂದಾರರಾಗಿದ್ದ ಶ್ರೀಮಠದ ರಘುನಾಥ ಹನುಮಂತ ತಿರುಮಲ ಹನುಮಂತೆಯವರು ತಮ್ಮ ಕಾಲದಲ್ಲಿ ಶ್ರೀ ಮುಷ್ಣ ಕ್ಷೇತ್ರ ಹಾಗೂ ಶ್ರೀರಂಗದಲ್ಲಿಯ ರಂಗನಾಥ ದೇವಾಲಯಗಳಲ್ಲಿ ಬಹುಕಾಲದಿಂದ ಬೆಳೆದು ಬಂದಿದ್ದ ಅಸಮಾಧಾನವನ್ನು ಹೋಗಲಾಡಿಸಲು ತಮ್ಮ ಗುರುಗಳಾಗಿದ್ದ ಶ್ರೀಮದುತ್ತರಾದಿ ಮಠಾಧೀಶರನ್ನು ಮುಂದಿಟ್ಟುಕೊಂಡು ಆ ಎರಡೂ ಕ್ಷೇತ್ರಗಳಲ್ಲಿಯ ಪರಂಪರಾಗತ ಸಂಪ್ರದಾಯಗಳನ್ನು ರಕ್ಷಿಸಿಕೊಂಡು ಬರಲು ಕಾರಣರಾದರು. ಇಂದಿಗೂ ಆ ಕ್ಷೇತ್ರಗಳಿಗೆ ಶ್ರೀಮಠವು ಆಗಮಿಸಿದಲ್ಲಿ ಅವರಿಗೆ ದೇವಸ್ಥಾನಗಳ ಯಾವನ್ಮರ್ಯಾದೆಗಳು ದೊರಕುವಂತೆ ಶಾಸನ ಮಾಡಿರುವದು ಬಹು ದೊಡ್ಡ ಸಾಧನವೆನಿಸುವದು.

ಶ್ರೀಮದುತ್ತರಾದಿ ಮಠವು ಭಾರತದ ಸಂಸ್ಕೃತಿ ಹಾಗೂ ಪ್ರಾಚೀನ ಸಂಪ್ರದಾಯಗಳನ್ನು ಕಾಪಾಡಿಕೊಂಡು ಬರುವುದರೊಂದಿಗೆ ವಿದ್ವಾಂಸರನ್ನು ಬೆಳೆಸಿಕೊಂಡು ಬಂದ ಮಠವೆನಿಸಿಕೊಳ್ಳುವದು. ಅನೇಕ ಉದ್ಗ್ರಂಥಗಳನ್ನು ರಚಿಸಿ ಶ್ರೀಮದಾಚಾರ್ಯರ ಸಿದ್ಧಾಂತವನ್ನು ರಕ್ಷಿಸಿಕೊಂಡು ಬಂದ ಏಕೈಕ ಮಠವೆಂದೆನಿಸುವದು. ಇಂದು ಶ್ರೀಮಠದ ಪೀಠದಲ್ಲಿ ವಿರಾಜಮಾನರಾದ ಸತ್ಯಾತ್ಮತೀರ್ಥರು ತಮ್ಮ ಹಿರಿಯರಂತೆ ಶ್ರೀಮಠದ ಕೀರ್ತಿಧ್ವಜವನ್ನು ಅಖಂಡ ಭಾರತದಲ್ಲಿ ರಕ್ಷಿಸಿಕೊಂಡು ಬರುವರೆಂಬುದರಲ್ಲಿ ಶ್ರೀಮಠದ ಶಿಷ್ಯರೆಲ್ಲ. ಅಚಲವಾದ ನಂಬಿಕೆ ಹೊಂದಿರುವರೆಂದು ಹೇಳಿಕೊಳ್ಳಲು ಅಭಿಮಾನವೆನಿಸುವದು. ಶ್ರೀಮದುತ್ತರಾದಿ ಮಠವೆಂದರೆ ಭಾರತದ ಸಾಂಸ್ಕೃತಿಕ ಸೇತುವೆ ಎಂದು ಹೇಳಿದಲ್ಲಿ ತಪ್ಪಾಗಲಾರದು.

# ಜ್ಞಾನೋದಯ

ಹಸ್ತಿನಾಪುರದ ರಾಜಭವನಗಳ ಮೇಲೆ ಬಂಗಾರದ ಹೊದಿಕೆ ಹಾಕಿದಂತೆ ಸೂರ್ಯ ಕಿರಣಗಳು ಪ್ರಸರಿಸಿದ್ದವು. ಸಮ್ರಾಟನಾದ ಧರ್ಮರಾಯನು ಅಂದಿನ ರಾಜಕಾರ್ಯಗಳನ್ನು ಮುಗಿಸಿ ಅದೇ ತಾನೆ ಮರುಳಿ ಹೊರಟಿದ್ದನು.

ಧರ್ಮಪರಾಯಣ ಪ್ರಭು ಎಂದೆನಿಸಿಕೊಳ್ಳುತ್ತಿದ್ದ ಆತನನ್ನು ಭೇಟಿಯಾಗಲು ಕಡುಬಡವನಾದ ಪ್ರಜೆಯೊಬ್ಬನು ಪ್ರಯತ್ನ ಮಾಡುತ್ತಲಿದ್ದನು. ಸಾಮ್ರಾಟನ ಅರಮನೆಯಲ್ಲಿ ಶ್ರೀಸಾಮಾನ್ಯನೊಬ್ಬನ ಪ್ರವೇಶ ಸುಲಭ ಸಾಧ್ಯವೇ? ಆದರೂ ಆ ಬಡವನು ತನ್ನ ಪ್ರಯತ್ನವನ್ನು ನಿಲ್ಲಿಸಲಿಲ್ಲ. ಸುದೈವವೋ ಎಂಬಂತೆ ದ್ವಾರಪಾಲಕರು ಉದಾರ ಮನಸ್ಸಿನಿಂದ ಆತನನ್ನು ಒಳಗೆ ಬಿಟ್ಟರು. ಬಹು ದಿನಗಳ ಆತನ ಬಯಕೆ ಈಡೇರಿದುದಕ್ಕೆ ಆ ಬಡವನಿಗಂತೂ ಅಪರಿಮಿತ ಆನಂದವಾಗಿ ಹೋಗಿತ್ತು. ಆತ ಬಹು ಭಕ್ತಿಯಿಂದ ಸಾಮ್ರಾಟರಿಗೆ ಆಶೀರ್ವಚನ ಸಲ್ಲಿಸಿದನು. ಆಗ ಧರ್ಮರಾಜನು, 'ಅಪ್ಪಾ ನೀವಾರು? ನಮ್ಮಿಂದ ನಿಮಗೇನಾಗಬೇಕಾಗಿದೆ?' ಎಂದು ಪ್ರಶ್ನೆ ಮಾಡಿದನು.

ಜೀಯ ಬಹು ದಿನಗಳಿಂದಲೂ ತಮ್ಮ ಸಾಮ್ರಾಜ್ಯದಲ್ಲಿ ಬಾಳಿ ಬದುಕುವ ನಾನೊಬ್ಬ ಸಾಮಾನ್ಯ ಪ್ರಜೆಯಾಗಿರುವೆ. ಬಡತನದಿಂದ ದಿನನಿತ್ಯದ ಸಂಸಾರವನ್ನು ಸಾಗಿಸುವುದೇ ಕಷ್ಟಸಾಧ್ಯದ ಕೆಲಸವಾಗಿದೆ. ಹಿರಿಯ ಮಗಳು ಈಗ ವಿವಾಹಯೋಗ್ಯವಾಗಿದ್ದಾಳೆ. ಯೋಗ್ಯವರನನ್ನು ಹುಡುಕಿ ವಿವಾಹ ಮಾಡಬೇಕೆಂಬ ಹೆಬ್ಬಯಕೆಯಿಂದ ಸನ್ನಿಧಾನದ ಸಹಾಯ

ಅಪೇಕ್ಷಿಸಿ ಬಂದಿದ್ದೇನೆ. ಪ್ರಭುಗಳು ನನ್ನ ಈ ಭಿನ್ನಹವನ್ನು ನಡೆಸಿಕೊಡಬೇಕಾಗಿ ಕೇಳಿಕೊಳ್ಳುತ್ತೇನೆ.

"ಅಪ್ಪಾ, ನೀನು ಸ್ವಲ್ಪ ಮುಂಚಿತವಾಗಿ ಬಂದಿದ್ದರೆ ಖಂಡಿತವಾಗಿಯೂ ನಿನ್ನ ಪ್ರಾರ್ಥನೆಯನ್ನು ಈಡೇರಿಸಿಕೊಡುತ್ತಿದ್ದೆವು. ನಿತ್ಯದ ವ್ಯವಹಾರವನ್ನು ಮುಗಿಸಿ ಈಗಾಗಲೇ ಎಲ್ಲರೂ ಹೊರಟು ಹೋಗಿದ್ದಾರೆ. ಆದುದರಿಂದ ನೀನು ನಾಳೆಯ ದಿನ ಬಂದರೆ ಖಂಡಿತವಾಗಿಯೂ ನಿನ್ನ ಕೆಲಸವನ್ನು ಪೂರೈಸಿಕೊಡುತ್ತೇನೆ'

ಯಾಚಕನಿಗೆ ಮಹಾರಾಜನ ಮಾತುಗಳನ್ನು ಕೇಳಿ ಮನಸ್ಸಿಗೆ ಬೇಸರವೆನಿಸಿತು. ಯಾವ ಮಾತನ್ನೂ ಆಡದೇ ಧರ್ಮರಾಜನಿಗೆ ವಂದಿಸಿ ಮೌನವಾಗಿ ಹೊರಗೆ ಬಂದುಬಿಟ್ಟನು.

"ಅಯ್ಯಾ ಪ್ರಭುಗಳು ನಿನಗೇನು ಹೇಳಿದರು?"

"ನಾಳೆ ಬರಲು ಅಪ್ಪಣೆ ಕೊಡಿಸಿದ್ದಾರೆ"

"ಹಾಗದರೆ ಸ್ವಲ್ಪ ನಿಲ್ಲು" ಎಂದು ನುಡಿದ ಭೀಮಸೇನನು ತನ್ನ ಕೈಯಲ್ಲಿದ್ದ ಬಂಗಾರದ ಕಡಗವನ್ನು ದಾನವಾಗಿಕೊಟ್ಟು, ಸಮೀಪದಲ್ಲಿದ್ದ ಸೇವಕರನ್ನು ಕರೆದು ತಕ್ಷಣವೇ ವಿಜಯ ದುಂದುಭಿಯನ್ನು ಬಾರಿಸುವಂತೆ ಅಪ್ಪಣೆ ಮಾಡಿದನು.

ರಾಷ್ಟ್ರದಲ್ಲಿ ಯಾವುದಾದರೊಂದು ವಿಶೇಷ ಸಂತೋಷದಾಯಕ ವಾರ್ತೆ ಅಥವಾ ಘಟನೆಗಳು ನಡೆದಾಗ ಈ ನಗಾರಿಯನ್ನು ಬಾರಿಸುವುದು ಸಂಪ್ರದಾಯಕವಾಗಿತ್ತು. ಅವ್ಯಾಹತವಾಗಿ ಬರುತ್ತಿದ್ದ ಧ್ವನಿಯಿಂದ ಧರ್ಮರಾಜನಿಗೆ ಪರಮಾಶ್ಚರ್ಯವೆನಿಸಿತು. ತಕ್ಷಣವೇ ಸೇವಕರನ್ನು ಕಳುಹಿಸಿ ಭೀಮಸೇನನನ್ನು ಕರೆಯಿಸಿಕೊಂಡನು. ಈ ವಿಜಯ ದುಂದುಭಿಯನ್ನೇಕೆ ಭಾರಿಸುತ್ತಿದ್ದಾರೆ ಎಂದು ಪ್ರಶ್ನೆಮಾಡಿದನು. ಆಗ ಭೀಮಸೇನನು-

"ಮಹಾಪ್ರಭು, ತಾವು ನಾಳಿನವರೆಗೂ ಬದುಕಿರುತ್ತೀರಿ ಎಂಬ

ಸಂತೋಷದ ಮಾತನ್ನು ಈಗ ತಾನೆ ತಾವು ಹೊರಗೆ ಕಳಿಸಿದ ಯಾಚಕನಿಂದ ತಿಳಿದುಕೊಂಡೆ. ತಮ್ಮ ಬದುಕಿನ ಗಳಿಗೆಯನ್ನು ಕೇಳಿ ಪ್ರಜೆಗಳೆಲ್ಲರೂ ಸಂತೋಷಪಡಲಿ ಎಂಬ ಅಪೇಕ್ಷೆಯಿಂದ ಈ ದುಂದುಭಿಯನ್ನು ಬಾರಿಸುವಂತೆ ಅಪ್ಪಣೆ ಮಾಡಿರುವೆ.''

ಮಾರ್ಮಿಕವಾದ ಯಾಥಾರ್ಥದ ಭೀಮನ ಮಾತನ್ನು ಕೇಳಿದಾಗ ಧರ್ಮರಾಜನಿಗೆ ತಾನು ಮಾಡಿದ ತಪ್ಪಿನ ಅರಿವಾಯಿತು. ಜನನ ಮರಣಗಳೆರಡೂ ಜೀವಿಯ ಅಧೀನವಲ್ಲ. ಆದುದರಿಂದ ನಾಳೆ ಮಾಡಬೇಕಾದ ಕೆಲಸವನ್ನು ಇಂದೇ ಮಾಡಿ ಮುಗಿಸುವುದು ವಿಹಿತ. ಸೋದರನು ಸರಿಯಾದ ವೇಳೆಯಲ್ಲಿಯೇ ನನ್ನನ್ನು ಎಚ್ಚರಿಸಿದ ಎಂದು ನೆನೆದು ಪುನಃ ಯಾಚಕನನ್ನು ಕರೆಯಿಸಿ ಕೈತುಂಬ ಧನವನ್ನಿತ್ತು ಕಳುಹಿಸಿದನು.

ಮಹಾಭಾರತದ ಈ ಘಟನೆ ಪ್ರತಿಯೊಬ್ಬ ಭಾರತೀಯನಿಗೂ ಬೋಧಪ್ರದ ವಿಷಯವೆಂದೆನಿಸಿಕೊಳ್ಳುವುದು.

# ರಘುನಾಥ ಹನುಮಂತೆ

ಮಧ್ವಾಚಾರ್ಯರು ದ್ವೈತಮತ ಪ್ರಚಾರಕ್ಕಾಗಿ ಘಟ್ಟದ ಮೇಲಿನ ಪಂಡಿತಶ್ರೇಷ್ಠರಲ್ಲಿ ನಾಲ್ಕು ಜನರನ್ನಾರಿಸಿ ಅವರಿಗೆ ಸನ್ಯಾಸ ದೀಕ್ಷೆಯನ್ನಿತ್ತರು. ಈ ಮಹನೀಯರೆಲ್ಲ ಗೋದಾವರಿ, ಕೃಷ್ಣಾ ಹಾಗೂ ಭೀಮಾ ತಟದ ನಿವಾಸಿಗಳಾಗಿದ್ದರಲ್ಲದೆ, ಶಾಸ್ತ್ರಕೋವಿದರಾಗಿದ್ದರಲ್ಲದೆ ರಾಜತಾಂತ್ರಿಕ ವ್ಯವಹಾರದಲ್ಲಿಯೂ ಸಹ ಅವರು ಬಹು ಕುಶಲರೆಂದು ಖ್ಯಾತರಾಗಿದ್ದರು.

ಕಾಶ್ಮೀರದ ಸಿಂಧೂ ಕಣಿವೆ ಅನ್ಯಾಕ್ರಾಂತವಾದಾಗ ಅಲ್ಲಿಯ ಪಂಡಿತರು ಕಾಶೀಕ್ಷೇತ್ರಕ್ಕೆ ಬಂದು ವಾಸಿಸತೊಡಗಿದರು. ಈ ಕಾಶಿಯ ಮೇಲೆ ಅನೇಕರ ದಾಳಿಗಳು ಆರಂಭಗೊಂಡಾಗ ಆ ವಿದ್ವಾಂಸರೆಲ್ಲ ಗೋದಾವರೀ ತೀರದ ಪೈಠಣ ಹಾಗೂ ಪುಣತಾಂಬಾ ಎಂಬ ಅಗ್ರಹಾರಗಳಲ್ಲಿ ಬಂದು ವಾಸಮಾಡತೊಡಗಿದರು.

ಮುದ್ಗಲ ಗೋತ್ರದ ಋಗ್‌ಶಾಖಾಧ್ಯಾಯಿ ಶ್ರೀಮದುತ್ತರಾದಿಮಠದ ಶಿಷ್ಯನಾದ ನಾರಾಯಣನೂ ಸಹ ಈ ಗೋದಾವರೀ ತೀರದವನು. ಯುದ್ಧದಲ್ಲಿ ಹನುಮಂತನಂತೆ ಆರ್ಭಟಿಸುತ್ತಿದ್ದುದರಿಂದ ನಾರಾಯಣ ಪಂಡಿತನ ಹೆಸರಿನೊಂದಿಗೆ ಹನುಮಂತೆ ಎಂಬ ಹೆಸರೂ ರೂಢನಾಮವಾಗಿ ಬಂದಿತು. ಕಾಲಾಂತರದಲ್ಲಿ ಲಖೂಜಿ ಜಾಧವನು ತನ್ನ ಮಗಳಾದ ಜೀಜಾಬಾಯಿಯನ್ನು ಶಿವಾಜಿಯೊಂದಿಗೆ ವಿವಾಹ ಮಾಡಿದಾಗ ಜೀಜಾಮಾತೆಯ ಅಂಗರಕ್ಷಕನಾಗಿ ನಾರಾಯಣ ಹನುಮಂತೆ ಶಹಾಜಿ ರಾಜನ ಆಶ್ರಯಕ್ಕೆ ಬಂದನು. ಈತನಿಗೆ ರಘುನಾಥ ಹಾಗೂ ಜನಾರ್ಧನ ಹನುಮಂತೆ ಎಂಬ ಪುತ್ರರಿದ್ದರು. ಶಹಾಜಿ ರಾಜನು ರಘುನಾಥ

ಹನುಮಂತೆಯವರಿಗೆ ತನ್ನ ಜಹಗೀರಿಯ ಭಾಗಗಳಾದ ಬೆಂಗಳೂರು ಹಾಗೂ ಕೋಲಾರ, ಜಿಂಜಿ ವೆಲ್ಲೂರು ಈ ಭಾಗದ ಮುಜುಮುದಾರಿಕೆಯನ್ನೊಪ್ಪಿಸಿದನು. ಶಹಾಜಿಯ ನಂತರ 1664ರಲ್ಲಿ ಈ ಸೋದರರು ವೆಂಕೋಜಿಯ ಸೇವೆಯಲ್ಲಿದ್ದರು. ವೆಂಕೋಜಿಯೊಂದಿಗೆ ಭಿನ್ನಾಭಿಪ್ರಾಯ ಮೂಡಿದಾಗ 1676ರಲ್ಲಿ ರಘುನಾಥ ಹನುಮಂತೆ ಛತ್ರಪತಿ ಶಿವಾಜಿರಾಜನ ಆಶ್ರಯಕ್ಕೆ ಬಂದನು. ಈತನಿಗೆ ದಕ್ಷಿಣ ಭಾರತದ ಕನ್ನಡ, ತೆಲುಗು, ತಮಿಳು, ಸಂಸ್ಕೃತ ಭಾಷೆಗಳೊಂದಿಗೆ ಫಾರ್ಶಿ ಭಾಷೆಯಲ್ಲೂ ಒಳ್ಳೇ ಪಾಂಡಿತ್ಯವಿದ್ದುದನ್ನು ಕಂಡು ಶಿವಾಜಿ ರಾಜನು ಈತನ ಹಿರಿತನದಲ್ಲಿ 'ರಾಜಕೋಶ' ಎಂಬ ಶಬ್ದಕೋಶವನ್ನು ಬರೆಸಿ ಪ್ರಕಟಿಸಿದನು. ಈ ಕಾರ್ಯವು ಬೆಂಗಳೂರಿನಲ್ಲಿಯೇ ಆರಂಭಗೊಂಡಿತು. ಫಾರ್ಶಿ ಶಬ್ದಗಳ ಬದಲಾಗಿ ಸಂಸ್ಕೃತ ಶಬ್ದಗಳನ್ನೊಳಗೊಂಡ ಮೊಟ್ಟಮೊದಲನೆಯ 'ಶಬ್ದಕೋಶ' ರಚನೆ ಇದೆಂದು, ಖ್ಯಾತಿ ಪಡೆಯಿತು.

ಛತ್ರಪತಿ ಶಿವಾಜಿರಾಜನು ದಕ್ಷಿಣ ದಿಗ್ವಿಜಯಕ್ಕಾಗಿ ಬಂದಾಗ ತಿರುವಣ್ಣಾಮಲೆ ಹಾಗೂ ಶ್ರೀಮುಷ್ಣ ಮತ್ತು ಶ್ರೀರಂಗ ಕ್ಷೇತ್ರಗಳಲ್ಲಿ ಕೆಲವು ಆಂತರಿಕ ಕಲಹಗಳಿಂದಾಗಿ, ಅನ್ಯಮತೀಯರ ಆಕ್ರಮಣಗಳಿಂದಾಗಿ ಸುಮಾರು ನಲ್ವತ್ತು ವರುಷಗಳ ಕಾಲ ತಿರುವಣ್ಣಾಮಲೆ ಶ್ರೀಮುಷ್ಣ ಕ್ಷೇತ್ರಗಳಲ್ಲಿ ಪೂಜಾದಿಗಳು ನಿಂತುಹೋಗಿದ್ದವು. ದೇವಾಲಯದ ಅನೇಕ ಭಾಗಗಳು ದಾಳಿಗೆ ಬಲಿಯಾಗಿದ್ದವು. ಅದನ್ನು ಕಂಡ ಶಿವಾಜಿ ರಾಜನು ಈ ಎರಡೂ ದೇವಾಲಯಗಳು ಹಿಂದಿನಂತೆ ವೈಭವದಿಂದ ಪೂಜೆಗೊಳ್ಳುವಂತೆ ಮಾಡಲು ರಘುನಾಥ ಹನುಮಂತೆಯವರಿಗೆ ಆಜ್ಞೆ ಮಾಡಿದನು.

ರಘುನಾಥ ಹನುಮಂತೆ ಇವರು ಶ್ರೀ ಮದುತ್ತರಾದಿ ಮಠದ ಶಿಷ್ಯರೆನಿಸಿಕೊಳ್ಳುತ್ತಿದ್ದರು. ಆದುದರಿಂದ ಅವರು ಈ ಕೆಲಸವನ್ನು ಕೈಗೆತ್ತಿಕೊಳ್ಳುವಾಗ ಆದ್ಯ ಮನೆತನ ಹಾಗೂ ತಾಮ್ರಪರ್ಣೆ ಮನೆತನದ ಹಿರಿಯರನ್ನು ತಮ್ಮ ವಿಶ್ವಾಸಕ್ಕೆ ತೆಗೆದುಕೊಂಡರು. ಸಾಮೋತಿರುಮಲ ದೇವಸ್ಥಾನ ಹಾಗೂ ಶ್ರೀಮುಷ್ಣದಲ್ಲಿರುವ ವರಾಹಸ್ವಾಮಿ

ದೇವಾಲಯಗಳಲ್ಲಿ ಎಂದಿನಂತೆ ವೈಭವದಿಂದ ಪೂಜಾದಿಗಳು ನಡೆಯುವಂತೆ ನೋಡಿಕೊಂಡರು. ಇದರಿಂದಾಗಿ ಆದ್ಯ ಮನೆತನದವರಿಗೂ ತಾಮ್ರಪರ್ಣಿ ಮನೆತನವರಿಗೂ ವರಾಹಸ್ವಾಮಿ ದೇವಾಲಯದವರಿಂದ ವಿಶೇಷ ಮಾನಸನ್ಮಾನಗಳು ಮುಂದುವರೆಸಿಕೊಂಡು ಹೋಗುವಂತೆ ವ್ಯವಸ್ಥೆ ಮಾಡಿದನು. 'ಆದ್ಯಂವೀಧಿ' ಎಂಬ ಬೀದಿಯನ್ನೇ ಆರಂಭಿಸುವಂತೆ ನೋಡಿಕೊಂಡನು. ತಮ್ಮ ವಂಶೋದ್ಧಾರಕ ಗುರುಗಳಾದ ಶ್ರೀ ಮದುತ್ತರಾದಿ ಮಠಾಧೀಶರು ದಿಗ್ವಿಜಯಕ್ಕಾಗಿ ಶ್ರೀಮುಷ್ಣಕ್ಕೆ ದಯಮಾಡಿಸಿದಾಗ ವರಾಹಸ್ವಾಮಿ ದೇವಾಲಯದಲ್ಲಿಯೇ ಶ್ರೀಮಠದ ಪೂಜೆಯಾಗುವಂತೆಯೂ ಹಾಗೂ ದೇವಾಲಯದ ಅಧಿಕಾರಿಗಳು ಶ್ರೀ ಸ್ವಾಮಿಯನ್ನು ಕರೆತಂದು ಶ್ರೀಗಳವರಿಂದ ಪೂಜೆ ಮಾಡಿಸಿಕೊಂಡು ಹೋಗಬೇಕೆಂಬ ವಿಚಾರವನ್ನು ಕಡ್ಡಾಯವಾಗಿ ನಿರ್ಬಂಧಿಸಿದನು. ಈ ಪದ್ಧತಿಯು ಇಂದಿಗೂ ನಡೆದುಕೊಂಡು ಬರುತ್ತಿರುವುದು ಸಂತೋಷದ ವಿಚಾರವಾಗಿರುವುದು. ಅದೇ ರೀತಿ ಶ್ರೀರಂಗಕ್ಕೆ ಸಂಸ್ಥಾನವು ವಿಜಯಮಾಡಿದಾಗ ಶ್ರೀಮದುತ್ತರಾದಿ ಮಠಾಧೀಶರನ್ನು ಸಕಲ ಮರ್ಯಾದೆಗಳೊಂದಿಗೆ ಪಲ್ಲಕ್ಕಿಯಲ್ಲಿ ಕೂಡಿಸಿ ಅವರನ್ನು ಕರೆದುಕೊಂಡು ಹೋಗಿ ಸ್ವಾಮಿಯ ದರ್ಶನ ಮಾಡಿಸಿ ಕಳಿಸಿಕೊಡುವ ಪದ್ಧತಿಯೂ ಸಹ ಆತನ ಕಾಲದಲ್ಲಿಯೇ ಆರಂಭವಾಯಿತು. ಈ ಪದ್ಧತಿಯೂ ಸಹ ಇಂದಿನವರೆಗೆ ಅವ್ಯಾಹತವಾಗಿ ನಡೆದುಕೊಂಡು ಬರುತ್ತಿರುವದು ಬಹು ಸಮಾಧಾನದ ವಿಷಯ.

ಶ್ರೀಮಠದ ಶಿಷ್ಯನಾದ ರಘುನಾಥ ಹನುಮಂತೆ-ಈತನಿಂದ ಮುನ್ನೂರು ವರ್ಷಗಳ ಹಿಂದೆ ಆರಂಭವಾದ ಈ ಸೇವೆಯು ಗೋದಾವರಿಯಿಂದ ಕಾವೇರಿ ತೀರದವರೆಗೆ ಓತಪ್ರೋತವಾಗಿ ಹರಿದು ಬಂದ ಭಾಗೀರಥಿಯಂತಾಗಿರುವದೆಂಬ ವಿಚಾರವನ್ನು ಇತಿಹಾಸದಿಂದ ತಿಳಿಯಬಹುದಾಗಿದೆ.

# ತಿರುಮಲದಲ್ಲಿ ಮಹಂತರ ಆಡಳಿತ

ಆಂಗ್ಲ ಆಡಳಿತಗಾರರು ಭಾರತವನ್ನೆಲ್ಲ ತಮ್ಮ ವಶಕ್ಕೆ ತೆಗೆದುಕೊಂಡಾಗ ಅಂದರೆ ಕ್ರಿ.ಶ. 1801ರಲ್ಲಿ ತಮ್ಮ ಆಡಳಿತ ಭಾಗದಲ್ಲಿರುವ ದೇವಾಲಯಗಳ ಮೇಲ್ವಿಚಾರಣೆಯನ್ನೂ ಸಹ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ದೇವಾಲಯಗಳಿಂದ ಬರುವ ಆದಾಯವನ್ನೆಲ್ಲ ರಾಜ್ಯದ ಸುಧಾರಣೆಗೆಂದು ಸಾರಿದರು. ಕಾಲಾನಂತರದಲ್ಲಿ ಅಂದರೆ 19ನೇ ಶತಮಾನದಲ್ಲಿ ಧಾರ್ಮಿಕ ಸಂಸ್ಥೆಗಳ ಆದಾಯಕ್ಕೆ ಕೈಹಚ್ಚುವುದು ಅಪಾಯಕಾರಿ ಎಂದೆನಿಸಿದಾಗ ದಕ್ಷಿಣದ ಪ್ರಸಿದ್ಧ ತೀರ್ಥಕ್ಷೇತ್ರವೆನಿಸಿದ ತಿರುಪತಿ ಹಾಗೂ ತಿರುಮಲೆ ದೇವಸ್ಥಾನಗಳು, ತಿರುಚಾನೂರಿನಲ್ಲಿರುವ ಅಮ್ಮನವರ ದೇವಸ್ಥಾನ ಇವುಗಳ ಆಡಳಿತದ ಅಧಿಕಾರವನ್ನು 1843ರಲ್ಲಿ ಹಾತೀರಾಮಜಿ ಮಠದ ಅಂದಿನ ಸೇವಾ ದಾಸಜಿ ಎಂಬ ಮಹಂತರಿಗೆ ಉತ್ತರ ಅರ್ಕಾಟ ಜಿಲ್ಲಾಧಿಕಾರಿಯು ಒಂದು ಸನದನ್ನು ರಚಿಸಿ ಈ ದೇವಾಲಯಗಳ ಉಸ್ತುವಾರಿಯನ್ನು ಮಹಂತರಿಗೆ ಒಪ್ಪಿಸಿದರು.

ಹಾತೀ ರಾಮಜಿ ಮಹಂತರ ಕಾಲದಲ್ಲಿ ಈ ದೇವಾಲಯಗಳ ಕೆಲವು ಭಾಗಗಳನ್ನು ಜೀರ್ಣೋದ್ಧಾರ ಮಾಡಲಾಯಿತು. ಅಲ್ಲದೆ ಹೊಸ ಹೊಸ ಕಾರ್ಯಕ್ರಮಗಳು ಆರಂಭವಾದವು. 1894ಮೇ, ಆಗಸ್ಟ್ ತಿಂಗಳಲ್ಲಿ ಒಂಭತ್ತು ತೀರ್ಥಗಳಿಂದ ಖ್ಯಾತವಾದ ಸ್ವಾಮಿಪುಷ್ಕರಣಿ ತೀರ್ಥಸ್ನಾನ ಜಲಕ್ರೀಡೆಯ ಉತ್ಸವವು ಆರಂಭಗೊಂಡಿತು. ಅಲ್ಲದೇ ದೇವಾಲಯದ ಅನೇಕ ಭಾಗಗಳೂ ಕೂಡ ಈತನ ಕಾಲದಲ್ಲಿ ರಿಪೇರಿ ಮಾಡಲ್ಪಟ್ಟವು.

ದೇವಾಲಯದ ಮುಖ್ಯದ್ವಾರದ ಗೋಪುರವು ತುಂಬ ಶಿಥಿಲವಾದುದರಿಂದ ಅವುಗಳನ್ನು ಪುನಃ ಗಾರೆ ಕೆಲಸ ಮಾಡಿಸಿ ಎಂದಿನಂತೆ ಕಾಣುವ ಹಾಗೆ ಮಾಡಲಾಯಿತು. ಈ ವಿಚಾರವನ್ನು ದೇವಾಲಯದ ತೆಲುಗು ಶಾಸನದಿಂದ ತಿಳಿಯಲಾಗುವುದು. ದೇವಾದಾಸನ ಅನಂತರ ಆ ಸ್ಥಾನಕ್ಕೆ 2.2.1865ರ ಮಾಘಮಾಸದಲ್ಲಿ ಈತನ ಶಿಷ್ಯನಾದ ಧರ್ಮದಾಸಜಿ ಎಂಬಾತನಿಗೆ ಮಹಂತನ ಅಧಿಕಾರವು ಪ್ರಾಪ್ತವಾಯಿತು. ಈತನು ತನ್ನ ಗುರುಗಳಾದ ಸೇವಾದಾಸರ ಸಮಾಧಿಯನ್ನು ಕಟ್ಟಿಸಿದನು. ಈ ಧರ್ಮದಾಸಜಿ ಕಪಿಲತೀರ್ಥದ ಪುಷ್ಕರಿಣಿಯೊಂದಿಗೆ ಆ ಪುಷ್ಕರಿಣಿಯ ಸುತ್ತಮುತ್ತಲಿನ ಮಂಟಪಗಳ ಜೀರ್ಣೋದ್ಧಾರ ಕಾರ್ಯವನ್ನು ಪೂರ್ಣಗೊಳಿಸಿದ ವಿಚಾರವು 1865.2.10ರಲ್ಲಿ ರಚಿತವಾದ ದಾಖಲಾತಿ ನಂ. 209 ರಿಂದ ತಿಳಿದು ಬರುವದು. ಮುಂದೆ ಬಂದ ಶೇಷಗಿರಿದಾಸನೆಂಬಾತನು ಹೊರಭಾಗದ ಅನೇಕ ಸ್ಥಳಗಳನ್ನು ಜೀರ್ಣೋದ್ಧಾರಗೈದನೆಂಬ ವಿಚಾರವು ತಿ.ತಿ.ದೇವಸ್ಥಾನದ 382ನೇ ಕಡತದಿಂದ ತಿಳಿದು ಬರುವುದು.

ಶೇಷಗಿರಿದಾಸನ ನಂತರ ರಾಮಲಕ್ಷ್ಮಣದಾಸ ಎಂಬ ಮಹಂತನ ಆಡಳಿತವು ಆರಂಭವಾಯಿತು. 1933ರಲ್ಲಿ ಈ ಮಹಂತರ ಆಡಳಿತವು ಕೊನೆಗೊಂಡಿತು. ಮುಂದೆ 1951ರಲ್ಲಿ ಹಿಂದೂ ಧಾರ್ಮಿಕ ದತ್ತಿ ಸಂಸ್ಥೆಯ ಕಾನೂನು ಹಾಗೂ 1966ರಲ್ಲಿ ರಚಿತವಾದ ಮುಜರಾಯಿ ಶಾಸನಗಳ ಆಧಾರದಂತೆ ಸಾರ್ವಜನಿಕರ ಅಭಿಪ್ರಾಯವನ್ನು ಸಂಗ್ರಹಿಸುವ ನಿಮಿತ್ತ ಧರ್ಮಧರ್ಶಿಗಳ ಒಂದು ಮಂಡಳಿಯು ರಚಿತವಾಗಿ ತಿ.ತಿ. ದೇವಾಲಯಗಳ ಆಡಳಿತಗಳನ್ನೆಲ್ಲ ಆ ಧರ್ಮದರ್ಶಿಗಳ ಮಂಡಳಿಯು ನೋಡಿಕೊಂಡು ಹೋಗುವಂತೆ ವ್ಯವಸ್ಥೆ ಮಾಡಲಾಯಿತು. ಅನಂತರ 1979ರಲ್ಲಿ ತಿರುಮಲ ತಿರುಪತಿ ದೇವಸ್ಥಾನಗಳ ಆಡಳಿತಕ್ಕಾಗಿಯೇ ಸ್ವಯಂ ಸೇವಾ ಮಂಡಳಿಯು ರಚಿತವಾಗಿ ಅತ್ಯಂತ ದಕ್ಷತೆಯೊಂದಿಗೆ ಆಡಳಿತಗಳು ಸಾಗುವಂತಾದವು.

ಇಂದು ಕಾಣುವ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ವ್ಯವಸ್ಥೆಯು ಭಾರತದಲ್ಲಿ ಅಷ್ಟೇ ಅಲ್ಲದೆ ವಿಶ್ವದಲ್ಲಿಯೇ ಮಾದರಿ ಆಡಳಿತವಾಗಿ ಮಾರ್ಗದರ್ಶಕವಾಗಿ ನಡೆದುಕೊಂಡು ಬಂದಿರುವುದನ್ನು ಕಾಣುವಂತಾಗಿರುವುದು.

# ಮಹೇಶ್ವರಭಟ್ಟ : ಗೋಮಾಂತಕದ ಪಂಡಿತ ಶ್ರೇಷ್ಠ

ಆತನ ಗುಣಗಳು ವರ್ಣನೆಗೆ ನಿಲುಕದಂತಹವು. ಆತನು ಜ್ಞಾನದಾಯಕನಾಗಿದ್ದಾನೆ. ಆ ಮಹಾನುಭಾವನ ಸೇವೆಗೈದರೆ ಶ್ರೇಯಃ ಪ್ರಾಪ್ತಿಯಾಗುತ್ತದೆ ಹಾಗೂ ಅಮೃತತ್ವವು ಲಭಿಸುತ್ತದೆ. ಅಮರಕೋಶ ಎಂಬ ಗ್ರಂಥವನ್ನು ನಿರ್ಮಿಸಿದ ಮಹಾನುಭಾವನಾದ ಅಮರಸಿಂಹನು ತನ್ನ ಗ್ರಂಥಾರಂಭದಲ್ಲಿ ಈ ಮಾತನ್ನು ಹೇಳಿದ್ದಾನೆ. ಆತನು ಜ್ಞಾನಕ್ಕೆ ಮಹತ್ವವನ್ನಿತ್ತಿದ್ದಾನೆಯೇ ಹೊರತು ಯಾವ ದೇವತೆಯ ಹೆಸರಿನಿಂದಲೂ ಸ್ತೋತ್ರವನ್ನು ಮಾಡಿರುವುದಿಲ್ಲ.

ಪ್ರಾಚೀನ ಭಾರತದಲ್ಲಿ ಪ್ರತಿಯೊಬ್ಬ ಸಂಸ್ಕೃತ ಪ್ರೇಮಿಯೂ ಯಾವುದೇ ಭೇದಭಾವವನ್ನೆಣಿಸದೆ ತಮ್ಮ ಸಂತಾನರಿಗೆ ಮೊದಲು ಅಮರಕೋಶವನ್ನು ಹೇಳಿಕೊಡುತ್ತಿದ್ದರು. ಯಾರಿಗೆ ಈ ಗ್ರಂಥವು ಮುಖೋದ್ಗತವಾಗುತ್ತಿತ್ತೋ ಅಂಥವನಿಗೆ ಮುಂದೆ ವ್ಯಾಕರಣ ಕಾವ್ಯ ಗ್ರಂಥಗಳಿಗೆ ಲೀಲಾಜಾಲವಾಗಿ ಪ್ರವೇಶವು ದೊರೆಯುತ್ತಿತ್ತು. ತಮ್ಮ ಮಕ್ಕಳನ್ನು ನಸುಕಿನ ಜಾವದಲ್ಲೆಬ್ಬಿಸಿ ಮುಸುಕಿನಲ್ಲಿಯೇ ಒಂದೊಂದೇ ಶ್ಲೋಕಗಳನ್ನು ಕಂಠಪಾಠ ಮಾಡಿಸುವ ಸಂಪ್ರದಾಯವಿತ್ತು.

ಕಾಲಾಂತರದಲ್ಲಿ ಈ ಕೋಶದ ಲೋಪದೋಷಗಳನ್ನಭ್ಯಾಸ ಮಾಡಿ ''ಮಹೇಶ್ವರೀ ಅಮರವಿವೇಕ'' ಎಂಬ ಟೀಕಾ ಗ್ರಂಥ'ವು ಹೊರಬರುವಂತಾಯಿತು. ಇ.ಸ. 1882ರಲ್ಲಿ ಚಿಂತಾಮಣಿಶಾಸ್ತ್ರಿ ಧತ್ತೆ ಎಂಬ ಮಹನೀಯರು ಈ ಗ್ರಂಥವನ್ನು ಕಂಡುಹಿಡಿದರು. ಅನಂತರ ಕರ್ನಾಟಕ ರಾಜ್ಯದ ವಿಜಾಪುರ ಜಿಲ್ಲೆಗೆ ಸೇರಿದ ಇಂಡೀ ತಾಲ್ಲೂಕಿನ ಝಳಕಿ

ಗ್ರಾಮ ನಿವಾಸಿಗಳಾಗಿದ್ದ ವಾಮನಾಚಾರ್ಯರೆಂಬ ಪಂಡಿತರು (ಇವರು ಉತ್ತರಾದಿಮಠದ ಪರಂಪರೆಯವರು), ಡಾ.ರಾ.ಗೋ. ಭಂಡಾರಕರ ಇವರ ಹಿರಿತನದಲ್ಲಿ ಇ.ಸ. 1890ರಲ್ಲಿ ಅಮರ ವಿವೇಕ ಗ್ರಂಥಕ್ಕೆ ಟಿಪ್ಪಣಿಯನ್ನು ರಚಿಸಿದರು. ಈ ಗ್ರಂಥವನ್ನು ಅಂದಿನ ಮುಂಬೈ ಸರಕಾರವು ಮುದ್ರಿಸಿತು. ವಾಮನಾಚಾರ್ಯರು ಮಹೇಶ್ವರಿ ಅಮರವಿವೇಕ ಗ್ರಂಥದಲ್ಲಿಯ ಶಬ್ದಗಳ ವಿವಿಧಾರ್ಥಗಳನ್ನು ಕುರಿತು ವಿವೇಚನೆ ಮಾಡಿರುವುದುಂಟು. ಈ ಕಾರ್ಯಕ್ಕಾಗಿ ಝಳಕಿಯವರು ವಿವಿಧ ಪ್ರಕಾರಗಳಲ್ಲಿರುವ ಎಂಭತ್ತು ಕೋಶಗಳನ್ನಭ್ಯಾಸ ಮಾಡಿದುದಾಗಿ ಹೇಳಿಕೊಂಡಿದ್ದಾರೆ.

# ಸತ್ಯಸಂಧ ವಿಜಯ ಹಾಗೂ ಕೋನೇರಿ ಮನೆತನ

ಕಾವೇರಿ ತೀರದಲ್ಲಿರುವ ತಂಜಾವೂರಿನ ಸರಸ್ವತಿ ಗ್ರಂಥ ಭಂಡಾರವೆಂದರೆ ಅದೊಂದು ಜ್ಞಾನ ಸಾಗರವೆಂದೇ ಕರೆಸಿಕೊಳ್ಳುವದು. ಈ ಗ್ರಂಥ ಭಂಡಾರದಲ್ಲಿ ಮರಾಠಿ ಭಾಷೆಯಲ್ಲಿ ರಚಿತವಾದ ಮಾಧ್ವಪೀಠಕ್ಕೆ ಸಂಬಂಧಿಸಿದ ಗ್ರಂಥ'ವನ್ನು ಅಲ್ಲಿಯ ಅಧಿಕಾರಿಗಳಾಗಿರುವ ಶ್ರೀನಿವಾಸಾಚಾರ್ಯರು ಎತ್ತಿ ತೋರಿಸಿದರು. ಆ ಗ್ರಂಥದ ಮೇಲ್ಭಾಗದಲ್ಲಿ "ಸತ್ಯಸಂಧ ವಿಜಯ" ಎಂದ್ದಿದ್ದು ಗ್ರಂಥಕರ್ತನ ಹೆಸರು ಕೋನೇರಾತ್ಮಜ ಎಂಬುದು ಕಂಡುಬಂದಿತು.

ಶ್ರೀ ಜಯತೀರ್ಥ ಮುನಿಗಳನ್ನು ಕುರಿತು ಕೃತಿ ರಚನೆ ಮಾಡುವ ಸಂಕಲ್ಪದಿಂದ ಎರಡು ಸಲ ಈ ಲೇಖಕನು ಅವರು ತಪೋನಿರತರಾಗಿದ್ದ ಯರಗೊಳ ಎಂಬಲ್ಲಿರುವ ಗುಹೆಯಲ್ಲಿ ಅವರ ದರ್ಶನ ಮಾಡಿ ಬಂದಿದ್ದು. ಆ ಗುಹೆಯ ಮುಂಭಾಗದಲ್ಲಿರುವ ಕಟ್ಟೆಗೆ ಕೋನೇರಿ ಆಚಾರ್ಯರ ಕಟ್ಟೆ ಎಂದು ಕರೆಯುವರೆಂದು ತಿಳಿದು ಬಂದಿತು. ಅನಂತರದಲ್ಲಿ ಮರಳುಗಾಡಿನ ರಾಜಧಾನಿಯಾದ ಬಿಕಾನೇರಿನಲ್ಲಿರುವ ಅನೂಪಸಿಂಗ್ ಗ್ರಂಥ ಭಂಡಾರಕ್ಕೆ ಹೋದಾಗ ಬಂಕಾಪುರದ ಕೋನೇರಿ ಆಚಾರ್ಯರಿಂದ ರಚಿತವಾದ ಶತಪಥ ಬ್ರಾಹ್ಮಣ ಎಂಬ ಒಂದು ಕೃತಿಯನ್ನು ಗ್ರಂಥಸೂಚಿಯಲ್ಲಿ ನೋಡಿದೆ. ಈ ಗ್ರಂಥ ಸೂಚಿಯು 1880ರಲ್ಲಿ ರಚಿತವಾಗಿದೆ, ಅದೇ ರೀತಿ ಉಸ್ಮಾನಿಯಾ ವಿಶ್ವವಿದ್ಯಾಲಯದ ಗ್ರಂಥಭಂಡಾರದಲ್ಲಿರುವ ಗ್ರಂಥದಲ್ಲಿಯೂ ಸಹ ಕೋನೇರಿ ಆತ್ಮಜವೆಂಬ ಹೆಸರಿನಿಂದ ಬರೆದ ಕಾವ್ಯಗ್ರಂಥವು ಕಂಡು ಬಂದಿತು.

ಈ ಮನೆತನವು ಮೂಲತಃ ಗೋದಾವರೀ ತೀರದಿಂದ ಬಂದ

ಕುಟುಂಬವಾಗಿದ್ದು ಅವರು ಪೇಶ್ವೆಯವರ ಅಧೀನ ಸರದಾರರೆಂಬ ವಿಚಾರವು ಮರಾಠಾ ದಪ್ತರಿಂದ ತಿಳಿದು ಬಂದಿತ್ತು. ಕಾಲಾಂತರದಲ್ಲಿ ಕರ್ನಾಟಕದಲ್ಲಿರುವ ಬಂಕಾಪುರಕ್ಕೆ ಬಂದು ಈ ಮನೆತನವು ವಾಸ ಮಾಡತೊಡಗಿತು. ಮುಂದೆ ಹೈದರಾಲಿಯೊಂದಿಗೆ ಯುದ್ಧವು ಸಾಗಿದಾಗ ಇದೇ ಕೋನೇರಿ ಮನೆತನದವರು ಹರಿಹರದಲ್ಲಿದ್ದು ತುಂಗಾ ನದಿಯನ್ನು ದಾಟುವಾಗ ಸುಂಕವನ್ನು ವಸೂಲಿ ಮಾಡುವ ಹುದ್ದೆ ಹೊಂದಿದ ಕಾರಣ ಅವರನ್ನು ಸುಂಕದ ಕೋನೇರಿ ಮನೆತನದವರು ಎಂದು ಕರೆಯತೊಡಗಿದರು. ಇಂದಿಗೂ ಆ ಮನೆತನದವರು ಹರಿಹರ ಹಾಗೂ ದಾವಣಗೆರೆಗಳಲ್ಲಿದ್ದಾರೆ. ಇದೇ ಕೋನೇರಿ ಮನೆತನದವರು ತಂಜಾವೂರಿನ ಅರಸರಲ್ಲಿ ಆಶ್ರಯದಾತರಾಗಿ ಬಾಳಿದರು. ರಾಜಾ ಸರ್ಫೋಜಿರಾಯನ ಕಾಲದಲ್ಲಿ (ಇ.ಸ. 1798-1834) ಇವರು ತಂಜಾವೂರಿಗೆ ಬಂದವರೆಂದು ತಿಳಿದು ಬರುವದು. ಇಲ್ಲಿಯ ಗ್ರಂಥಭಂಡಾರದಲ್ಲಿರುವ ಗ್ರಂಥಗಳಲ್ಲಿ ಹಾಗೂ ಬೃಹದೇಶ್ವರ ದೇವಾಲಯದ ಶಿಲಾಲೇಖದಲ್ಲಿ ಕೋನೇರಿ ಎಂಬ ಹೆಸರುಗಳು ನಾನಾ ರೀತಿಯಿಂದ ಅಂದರೆ, ಕೋನೇರಾತ್ಮಜ, ಕೋನೇರಿ ತನಯ, ಕೋನೇರಿ ನಂದನ ಈ ರೀತಿಯಲ್ಲಿದ್ದುದು ಕಾಣಸಿಗುವದು.

'ಸತ್ಯಸಂಧ ವಿಜಯ' ಈ ಗ್ರಂಥದ ಭಾಷೆ ಬಹು ಸುಲಭವಾದುದು. ಮೂಲ ಮರಾಠಿ ಭಾಷೆಯಲ್ಲಿ ಈ ಕಾವ್ಯವು ಬರೆಯಲ್ಪಟ್ಟಿರುವದು. ಸವಣೂರಿನ ನವಾಬನು ಶ್ರೀ ಸತ್ಯಬೋಧರಿಗೆ ಆಶ್ರಯವನ್ನಿತ್ತ ಕಾರಣ ಅವರು ಇ.ಸ. 1784ರಲ್ಲಿ ಸವಣೂರಿನಲ್ಲಿಯೇ ವೃಂದಾವನಸ್ಥರಾದರು. ಮುಂದೆ ಹೈದರನ ಮಗನಾದ ಟಿಪ್ಪುವಿನ ಕಾರಭಾರವು ಆರಂಭವಾದಾಗ ಶ್ರೀ ಸತ್ಯಬೋಧರ ಶಿಷ್ಯರಾದ ಶ್ರೀ ಸತ್ಯಸಂಧ ತೀರ್ಥರು ತಮ್ಮ ಆಶ್ರಮಾನಂತರ ಪಂಢರಾಪುರದತ್ತ ಪ್ರಯಾಣ ಮಾಡಿದರು. (ಇ.ಸ. 1785) ಸ್ವತಃ ಪಾಂಡುರಂಗ ದೇವನೇ ಬಂದು ಶ್ರೀಗಳವರಿಗೆ ಆಮಂತ್ರಣವನ್ನಿತ್ತನೆಂದು ಅವರ ಚರಿತ್ರೆಯಿಂದ ತಿಳಿದು ಬರುವುದು. ಮುಂದೆ ಸತ್ಯಸಂಧರು ಉತ್ತರ ಭಾರತದ ಪವಿತ್ರ ತೀರ್ಥ ಕ್ಷೇತ್ರಗಳಿಗೆಲ್ಲ ಭೇಟಿಯನ್ನಿತ್ತ ನಂತರ

ದಕ್ಷಿಣದಲ್ಲಿದ್ದ ಕಾವೇರಿ ತೀರದ ತಂಜಾವೂರಿನ ಅರಸನಾದ ಅಮರಸಿಂಹನ ಆಮಂತ್ರಣದ ಮೇರೆಗೆ (ಈತನು ರಾಜಾ ತುಳಜೇಂದ್ರನ ದಾಸಿ ಪುತ್ರ) ಶ್ರೀಮದುತ್ತರಾದಿ ಮಠಾಧೀಶರಾಗಿದ್ದ ಶ್ರೀ ಸತ್ಯಸಂಧ ತೀರ್ಥರು ತಮ್ಮ ಸಂಸ್ಥಾನದೊಂದಿಗೆ ತಂಜಾವೂರಿಗೆ ಇ.ಸ. 1772ರ ಸುಮಾರಿನಲ್ಲಿ ಆಗಮಿಸಿದರು. ಆ ಸಂದರ್ಭವನ್ನು ಕುರಿತು ಸತ್ಯಸಂಧ ವಿಜಯ ಎಂಬ ಕಾವ್ಯದ ಕರ್ತೃಗಳಾದ ಕೋನೇರಿಯವರು ಈ ರೀತಿ ಉಲ್ಲೇಖನ ಮಾಡಿದ್ದಾರೆ.

*ಪರಿಧಾವಿ ಸಂವತ್ಸರೀ ತ್ರಯೋದಶಿ ಯದಾ।*
*ಆಷಾಢೀ ಶುಕ್ಲ ಇಂದುವಾಸರಿ ತದ।*
*ಯತಿವರ್ಯಾತೇ ಮುದಾ ದೇಖಾವಯಾ ಭೂಪಯೇ।*
*ಸಂಗೇ ಘೇವೂನಿಯಾ ಗಜರಥ।*
*ಸಕಳಾಂಚೆ ಪುರವಣಾರಾ ಮನೋರಥ। ಅಂಬರಿಯಾ ವಾದೇ ಬಹುತಾ।*
*ಶಾತಕಾ ಝುಳತ ಭೂಪ ಯೇತಾ ಜಾಲಾ। ಬಾಲೇ ಭರ್ಜೀ ನಾನಾಪರಿ।*
*ವಾದ್ಯ ಘೇವೂನಿಯಾ ಸಂಧ್ಯನದೀತಿರಿ।*
*ಬಂಧು ಜನ ಅಮಾತ್ಯ ಸಪರಿವಾರೀ।*
*ರಾಜಾ ಸತ್ವರೀಚೆ ಭಕ್ತಿ ಕಡೂನಿಯಾ।*

ಈ ರೀತಿ ಸಕಲ ವೈಭವಗಳೊಂದಿಗೆ ಅಮರಸಿಂಹ ರಾಜನು ಶ್ರೀ ಸತ್ಯಸಂಧ ತೀರ್ಥರನ್ನು ಕರೆತಂದು ತನ್ನ ಅರಮನೆಯಲ್ಲಿ ಬಿಡಾರ ಮಾಡಿಸಿದನೆಂಬ ಭಾಗವು ಅತ್ಯಂತ ಮನೋಹರವಾದ ಕಾವ್ಯ ಭಾಗವಾಗಿ ತೋರುತ್ತದೆ. ಶ್ರೀಗಳವರು ರಾಜನ ಪ್ರಾರ್ಥನೆಯ ಮೇರೆಗೆ ಅರಮನೆಯಲ್ಲಿ ಪೂಜೆ ಮಾಡಿದರೆಂಬ ವಿಚಾರವನ್ನು ಕುರಿತು ಕವಿಯು ಈ ರೀತಿ ಹೇಳಿದ್ದಾನೆ.

*ಆಣಿ ಮೂರ್ತೀತೇ ರಘುನಾಥಾಚೀ। ಭಕ್ತಾ ಜನಾತೇ ಕೈವಲ್ಯದಾಯಕಾಚೀ।*
*ಕಾಹೇ ತೇ ವೈಧೂರ್ಯ ಮಾಣಿಕಾಚೀ। ಅತ್ಯಂತ ಸುಂದರ ಕಾಂಚೀ ವಿರಾಜತೇ।*
*ಆಣಿ ತಯಾಚೀ ಸಮೀಪ ಜಾನಕೀ ಸತಿ। ರಾಹೇ ಪರಮ ಸೌಂದರ್ಯ ಖಾಣೀ*
*ಮಂದಹಸತಿ।*

ರಾಜಾ ಅಮರಸಿಂಹನು ಅಂದು ಶ್ರೀಪಾದರ ಸನ್ನಿಧಿಗೆ ಅನೇಕ ಮುತ್ತು

ರತ್ನ ವಜ್ರ, ವೈಢೂರ್ಯಗಳ ಆಭರಣಗಳೊಂದಿಗೆ ಕೆಲವು ಆನೆಗಳನ್ನೂ ಅಶ್ವಗಳನ್ನೂ, ಗೋವುಗಳನ್ನೂ ಅರ್ಪಿಸಿದನೆಂದು ಹೇಳಲಾಗಿದೆ. ಈ ಮಹೋತ್ಸವವು ಇ.ಸ. 1792ರಲ್ಲಿ ನಡೆದುದಾಗಿ ಕಾವ್ಯವನ್ನಭ್ಯಾಸ ಮಾಡಿದಾಗ ತಿಳಿದು ಬರುತ್ತದೆ. ಶ್ರೀ ಸತ್ಯಸಂಧ ವಿಜಯ ಕಾವ್ಯಗ್ರಂಥವನ್ನು ಸೆಕೆ 1747 ಇ.ಸ. 1825 ಪಕ್ಷಮಾಸದಲ್ಲಿ ಬರೆಯಲು ಪ್ರಾರಂಭಿಸ ಲಾಯಿತೆಂದು ಕವಿಯು ಹೇಳಿಕೊಂಡಿದ್ದಾನೆ. ಸತ್ಯಸಂಧ ವಿಜಯ ಗ್ರಂಥವನ್ನು ರಚಿಸಿದ ಕವಿಯ ಹೆಸರು ಕೋನೇರಿ ಸುತ ಎಂದು ಉಲ್ಲೇಖಿಸಲಾಗಿದೆ. ಈ ಕೋನೇರಿ ಸುತ ಎಂಬ ಕವಿಯು ಅರಣಿಯ ಜಹಗೀರದಾರರ ಮನೆತನದವನಾಗಿರಬಹುದೇ ಎಂದೆನಿಸುತ್ತದೆ. ಯಾಕೆಂದರೆ ಬೃಹದೇಶ್ವರ ದೇವಾಲಯದ ಗೋಡೆಗಳಲ್ಲಿ ಕೋನೇರಿರಾವ್ ಎಂಬ ಹೆಸರನ್ನು ಕಾಣುವದರಿಂದ ಬಹುಶಃ ಆ ಮನೆತನದ ಹಿರಿಯರಿಂದಲೇ ಈ ಗ್ರಂಥವು ರಚನೆಯಾಗಿರಬಹುದೆಂಬ ಊಹೆಗೆ ಅವಕಾಶವಿದೆ.

ಕೋನೇರಿ ಎಂಬ ನಾಮಧೇಯದ ಕುಟುಂಬದವರು ಇಂದಿಗೂ ಶ್ರೀಮದುತ್ತರಾಧಿ ಮಠದ ಶಿಷ್ಯ ಪರಂಪರೆಯಲ್ಲಿರುವುದರಿಂದ ಈ ಮನೆತನದ ಇತಿಹಾಸವು ಅಭ್ಯಾಸಿಗರಿಗೆ ಹೆಚ್ಚಿನ ಸಂಶೋಧನೆಗಾಗಿ ಆಹ್ವಾನವನ್ನೀಯುವಂತಹ ವಿಷಯವಾಗಿದೆ.

(ಕೋನೇರಿ ಎಂಬ ಗ್ರಾಮವು ಪುಣೆಗೆ ಹತ್ತಿರದಲ್ಲಿರುವದು ಮಹತ್ವದ ವಿಷಯವೆನಿಸುತ್ತದೆ)

# ಜಯತೀರ್ಥರ ಮೂಲ ವೃಂದಾವನ ಮಳಖೇಡದಲ್ಲಿ

ಜಯತೀರ್ಥರು (1368 ರಿಂದ 1391) 23 ವರ್ಷಗಳವರೆಗೆ ಶ್ರೀಮಧ್ವರ ಮೂಲ ಮಹಾಸಂಸ್ಥಾನದಲ್ಲಿ ವಿರಾಜಿಸಿ ಕೊನೆಯಲ್ಲಿ ತಮ್ಮ ಗುರುಗಳಾದ ಶ್ರೀ ಅಕ್ಷೋಭ್ಯ ತೀರ್ಥರ ಸನ್ನಿಧಿಯಲ್ಲಿ ಪವಿತ್ರ ಕಾಗಿಣೀ ತೀರದಲ್ಲಿ, ಮಳಖೇಡದಲ್ಲಿ, ವಿಭವಸಂವತ್ಸರದ ಆಷಾಢ ಕೃಷ್ಣ ಪಂಚಮಿಯ ದಿನದಂದು ಸಶರೀರ ವೃಂದಾವನ ಪ್ರವೇಶ ಮಾಡಿದರು.

*"ಮೋಕ್ಷದಾತರ ಅಕ್ಷೋಭ್ಯತೀರ್ಥರ ಸಾಕ್ಷಿಶಿಷ್ಯ, ಅಪೇಕ್ಷರಹಿತರ'*
*"ಯೋಗಿಗಳರಸನೇ ಮಳಖೇಡ ನಿವಾಸ"*
*"ಕಾಗಿನೀ ತಟವಾಸ ವಿಜಯವಿಠಲದಾಸ"*
*"ಮಧ್ವನಾಥಪುರ ಕಟುರವೇಣಿವಾಸ"*
*"ರಾಘವೇಶ ವಿಜಯವಿಠಲನ್ನ ನಿಜದಾಸ"*

ಎಂಬುದಾಗಿ ವಿಜಯದಾಸರು (1687 ರಿಂದ 1755) ತಮ್ಮ ಕೃತಿಗಳಲ್ಲಿ ಮಳಖೇಡದಲ್ಲಿಯೇ ಇರುವ ಜಯತೀರ್ಥರನ್ನು ವರ್ಣಿಸಿದ್ದಾರೆ. ಅಪರೋಕ್ಷಜ್ಞಾನಿಗಳಾದ ದಾಸರು ಜಯತೀರ್ಥರ ಮೂಲ ವೃಂದಾವನ ಮಳಖೇಡದಲ್ಲಿಯೇ ಇರುವದೆಂದು ಸಾರಿದ್ದಾರೆ. ಶ್ರೀ ವಾದಿರಾಜ ಸ್ವಾಮಿಗಳು ಎಲ್ಲಿಯೂ ಟೀಕಾರಾಯರು ನವವೃಂದಾವನದಲ್ಲಿ ಇದ್ದಾರೆಂದು ಅಪ್ಪಿತಪ್ಪಿಯೂ ನುಡಿದಿಲ್ಲ. ತೀರ್ಥಪ್ರಬಂಧದಲ್ಲಿ ಎಲ್ಲ ತೀರ್ಥಗಳನ್ನು ಕ್ರಮವಾಗಿ ವರ್ಣಿಸುತ್ತ ಬರುವಾಗ ನಿವೃತ್ತಿ ಸಂಗಮ ನಂತರ ಹಂಪೆ, ಅಲ್ಲಿಂದ ಮಳಖೇಡ ನಂತರ ತಿರುಪತಿ ಕಂಚಿ ಹೀಗೆ ವರ್ಣಿಸಿದ್ದಾರೆ ಆನೆಗೊಂದಿಯ

ಪದ್ಮನಾಭತೀರ್ಥರ ವೃಂದಾವನದ ಪರಿಸರ ವರ್ಣಿಸಿದ ನಂತರ ಜಯತೀರ್ಥರನ್ನು ವರ್ಣಿಸಿರುವುದರಿಂದ ಜಯತೀರ್ಥರು ನವವೃಂದಾವನ ಗಡ್ಡೆಯಲ್ಲಿ ಇರುವರು ಎನ್ನುವುದಾದರೆ ನಂತರ ವರ್ಣಿತವಾದ ತಿರುಪತಿಯ ಕ್ಷೇತ್ರವು ನವವೃಂದಾವನದಲ್ಲಿ ಇದೆ ಎಂದು ಅನ್ನಬಹುದೇ? ಪೂರಿ ಜಗನ್ನಾಥನ ವರ್ಣನೆಯ ನಂತರ ಶ್ರೀಶೈಲವನ್ನು ವರ್ಣಿಸಿದ್ದಾರೆ ಎಂದು ಶ್ರೀಶೈಲಪುರಿಯಲ್ಲಿ ಜಯತೀರ್ಥರ ವೃಂದಾವನ ಇದೆ ಎಂದು ಹೇಳಲು ಬರುವುದೇ? ಇತ್ತೀಚಿನ ಯಾರೋ ಟಿಪ್ಪಣಿಕಾರರು ಗಜಗಂ ಹರೇ ಆನೆಗೊಂದೆಯಲ್ಲಿ ಸ್ಥಿತ್ವಾ ಇದ್ದವರಾಗಿ ಎಂದು ಜಯತೀರ್ಥರನ್ನು ವರ್ಣಿಸುವರು ಎಂದು ಅವತರಣಿಕೆ ಕೊಟ್ಟಾಕ್ಷಣವೇ ವಾದಿರಾಜರು ಹಾಗೆ ಹೇಳಿದರೆಂದು ಯಾರೂ ಹೇಳಲಾರರು, ಆದರೆ ಕೆಲವರು ಹೇಳುತ್ತಿರುವರಲ್ಲ ಎಂದರೆ ಅದು ಸತ್ಯಕ್ಕೆ ದೂರವಾದುದಷ್ಟೆ. ಶತಕಾನುಶತಕಗಳಿಂದ ಮಳಖೇಡದಲ್ಲಿ ನೆಲೆನಿಂತು ಅನುಗ್ರಹಿಸುತ್ತಿರುವ ಜಯತೀರ್ಥರನ್ನು ಅಲ್ಲಗಳೆಯುವುದು ಸಾಹಸದ ಹಾಗೂ ಅವಿವೇಕದ ಮಾತಾಗುವುದು.

*'ಲಲಿತ ಮಂಗಳವೇಡಿಸ್ಥ ರಘುನಾಥ ವನಿತಾ ಸಂಜಾತ*
*ನಿಲಯ ಮಳಖೇಡ ಕಾಗಿಣಿತೀರ ವಾಸ ತಾಪತ್ರಯದೂರ'*

ಎಂದು ವರದೇಶ ವಿಠ್ಠಲರು ಹೇಳಿದ್ದಾರೆ.

'ಆಷಾಢ ಬಹುಳ ಪಂಚಮಿಯು ಬರುತ ಕಳೇಬರುವನೆ ಬಿಡುತ

***ವ್ಯಾಸ ವಿಠಲನ ಪಾದದಲಿ ನಿರುತ ಮಳಖೇಡದೊಳು ಸತತ***
***ವಾಚಿಪ ಪಾಪಿನ ತೆರದೊಳ್ ಪ್ರಖ್ಯಾತ ನಿಜಗುಣಗಣನೀತ'***

ಎಂದು ವ್ಯಾಸ ವಿಠಲರೆನಿಸಿದ ಕಲ್ಲೂರ ಸುಬ್ಬಣ್ಣಾಚಾರ್ಯರು (1775) ಹೇಳಿದ್ದಾರೆ. ವ್ಯಾಸರಾಜ ಮಠಾಧೀಶರಾದ ಶ್ರೀ ಶೇಷಚಂದ್ರಿಕಾಚಾರ್ಯರೆನಿಸಿದ ಶ್ರೀ ರಘುನಾಥತೀರ್ಥರು (1695-1742) ತತ್ವಕಣಿಕಾ ಎಂಬ ತಮ್ಮ ಗ್ರಂಥದಲ್ಲಿ

*ಕಾಗಿನೀ ತಟಿನೀ ತೀರ ಮಂದಿರಂ ಯತಿಶೇಖರಂ।*
*ಶ್ರೀ ಗುರುಂ ಜಯತೀರ್ಥಾಖ್ಯಾಂ ಸಾದರಂ ನೌಮಿ ಸಂತತಂ ॥*

ಎಂದು ಕಾಗಿನೀ ತೀರದಲ್ಲಿರುವ ಜಯತೀರ್ಥ ಮುನಿಗಳಿಗೆ ವಂದಿಸಿದ್ದಾರೆ.

ಸಂಸ್ಕೃತದಲ್ಲಿ ಬರೆಯಲ್ಪಟ್ಟ ವಿಜಯ ಕಾವ್ಯಗಳಲ್ಲಿ ಅಪರೋಕ್ಷಜ್ಞಾನಿಗಳಾದ ಹರಿದಾಸರ ವಾಣಿಯಲ್ಲಿ ಜಯತೀರ್ಥರ ಮೂಲ ವೃಂದಾವನವು ಮಳಖೇಡದಲ್ಲಿಯೇ ಎಂದು ಕೊಂಡಾಡಲ್ಪಟ್ಟಿದೆ. ಶ್ರೀ ಮಧ್ವಾಚಾರ್ಯರ ಮೂಲಮಹಾ ಸಂಸ್ಥಾನಾಧಿಪತಿಗಳಾದ ಶ್ರೀ ಜಯತೀರ್ಥರ ಉತ್ತರಾಧಿಕಾರಿಗಳಾದ ಶ್ರೀ ವಿದ್ಯಾಧಿರಾಜರಿಂದ ಆರಂಭಿಸಿ ಶ್ರೀ ಸತ್ಯಪ್ರಮೋದ ತೀರ್ಥರವರಿಗೆ ಎಲ್ಲ ಯತಿಶೇಖರರಿಂದ ನಿತ್ಯವೂ ಮಳಖೇಡದಲ್ಲಿಯೇ ಮೂಲ ವೃಂದಾವನದಲ್ಲಿಯೇ ಶ್ರೀ ಟೀಕಾರಾಯರು ಅರ್ಚಿಸಲ್ಪಡುತ್ತಾರೆ. ಸಾವಿರಾರು ಜನ ತಮ್ಮ ಸೇವಾ ಸೂತ್ರಗಳಿಂದ ಪ್ರತ್ಯಕ್ಷ ದರ್ಶನ ಅನುಗ್ರಹಗಳನ್ನು ಅಲ್ಲಿ ಪಡೆದಿದ್ದಾರೆ. ಇಂತಹ ಮಳಖೇಡ ನಿವಾಸಿಗಳಾದ ಸರ್ವಜ್ಞಕಲ್ಪರಾದ ಶ್ರೀ ಜಯತೀರ್ಥರು ಸದೇಹ ವೃಂದಾವನ ಪ್ರವೇಶ ಮಾಡಿ ಈ ಆಷಾಢ ವದ್ಯ ಪಂಚಮಿಗೆ ಸರಿಯಾಗಿ 610 ವರ್ಷಗಳು ಸಂದಿವೆ.

ಜಯತೀರ್ಥರು ಮಾನ್ಯಖೇಟ ಅಥವಾ ಮಳಖೇಡದಲ್ಲಿ ವೃಂದಾವನಸ್ಥರಾದ ವಿಚಾರವನ್ನು ಕುರಿತು ಸಮರ್ಥ ರಾಮದಾಸರ ಶಿಷ್ಯರಾದ ಆತ್ಮಾರಾಮಭುವಾ ಎಂಬುವವರು ಮೂಲತಃ ಗುಲಬರ್ಗಾ ಜಿಲ್ಲೆಯ ಆಪಚಂದ ಎಂಬ ಗ್ರಾಮ ನಿವಾಸಿಗಳಾಗಿದ್ದರು. ಈ ಕುಗ್ರಾಮವು ಆಳಂದ ತಾಲ್ಲೂಕಿನಲ್ಲಿರುವುದು. ಕಾಲ 1700 ರಿಂದ 1778. ಈ ಮಹಾನುಭಾವರು ಸಮರ್ಥರ ಜೀವನವನ್ನು ಕುರಿತು ದಾಸವಿಶ್ರಾಮಧಾಮ ಎಂಬ ಕೃತಿಯನ್ನು ರಚಿಸಿರುವರು. ಮಹಾರಾಷ್ಟ್ರದಲ್ಲಿ ಈ ಗ್ರಂಥವನ್ನು ಭಗವದ್ಗೀತೆಯಂತೆ ಪೂಜಿಸುವರು.

ಈ ಮಹನೀಯರು ತಮ್ಮ ''ದಾಸವಿಶ್ರಾಮ ಧಾಮ'' ಎಂಬ ಗ್ರಂಥದಲ್ಲಿ ಗುಲಬುರ್ಗಾದಿಂದ 22 ಮೈಲಿನಲ್ಲಿ ಮಳಖೇಡ ಎಂಬ ಗ್ರಾಮವಿದೆ. ಈ ಗ್ರಾಮದಲ್ಲಿ ವೈಷ್ಣವರ ದ್ವೈತಮಾಧ್ವ ಸಂಪ್ರದಾಯದ ಮಹಾನ್ ಭಾಷ್ಯಕಾರ (ಭಾರತಾತೀಲ ಥೋರ ತತ್ವಜ್ಞ) ಭಾರತದ ಶ್ರೇಷ್ಠ ತತ್ವಜ್ಞಾನಿಗಳಾದ ಜಯತೀರ್ಥರ ಸಮಾಧಿಯು (ವೃಂದಾವನವು) ಇದೆ. ಆ ವೃಂದಾವನದ ಮಹತಿಯನ್ನು ಕುರಿತು ಅವರು ಈ ರೀತಿ ವರ್ಣಿಸಿದ್ದಾರೆ ಜಾಲಿತೆ ಪುಡಾರೀ ತೋ ಉತ್ತಮ ಸ್ಥಳ। ಜಯತೀರ್ಥರಾಯಾಚೆ ದೇಖಿರೆ। ಶಿಷ್ಯವರ್ಗ ಉತರತೆ ತಿರೀತಿಥೆ। ಸ್ವಾಮಿರಾಜಗೇತೀ ತ್ಯಾಮಳಖೇಡಾತ॥

*ಪಿರಾಜದೇ ತೇಥಿಲ ತೋಷಿತೀ ಬಹುತ / ಪಾವೋನ ನಿಜಖೂಣ ಗುರುಮುಖೇ ಸಹೇತಾ ಹೀ ಸಾಮುಗ್ರೀ ಧಾಡಿಲೀ / ಸಯುಪಾಕಥಾಲಾ ಸಮಾಧೀ ಜವಳೀ // ನೈವೇದ್ಯ ಸ್ವಾಮಿನೀ ನೇತಾದೇವುಳೀ / ಸರ್ಪ ಜಾರಾಸೇ ಟೀಕಾಕರು / ಭಯ ನ ಧರಿತಾ ಕಾಹೀಂ ಸಂಶಯ / ಸಾದ್ರಸ್ಯ ಜಾಲಾ ತೋ ಯತಿರಾಯ // ಸಾರುನಿ ಭೋಜನಾ ಮಗ ಗುರುರಾಜ / ಮುಡವಳಾ ಪ್ರತಿ ಷ್ಠಾತಿ /*

ಆತ್ಮಾರಾಮ ಭುವಾ ಅವರಿಗೆ ಜಯತೀರ್ಥ ಮುನಿಗಳು ಘಟಸರ್ಪ ರೂಪದಲ್ಲಿ ದರ್ಶನವಿತ್ತರು ಎಂಬ ಮಾತನ್ನು ಯಾರು ಬೇಕಾದರೂ ದಾಸವಿಶ್ರಾಮಧಾಮ ಗ್ರಂಥದಿಂದ ತಿಳಿದುಕೊಳ್ಳಬಹುದು (ಪುಟ 960).

ಜಯತೀರ್ಥರ ಮೂಲ ವೃಂದಾವನವು ಮಳಖೇಡದಲ್ಲಿಯೇ ಹೊರತು ಬೇರಾವ ಸ್ಥಳದಲ್ಲಿಯೂ ಇಲ್ಲ. ಕಾಗಿಣೆ ತೀರದ ಇನ್ನೊಂದು ದಂಡೆಯ ಮೇಲೆ ಮುಳಗೊಡ ಎಂಬ ಗ್ರಾಮದಲ್ಲಿ ವೀರಶೈವ ಮಠವಿದ್ದು ಆ ಮಠದವರೂ ಸಹ ಇಂದಿಗೂ ಟೀಕಾಚಾರ್ಯರಿಗೆ ಮನ್ನಿಸುತ್ತ ಬಂದಿದ್ದಾರೆ.

ಇದು ಮಹತ್ವದ ವಿಚಾರವಾಗಿರುವದು

# ಶ್ರೀನಾಥದ್ವಾರ

ಭಾರತದ ಇತಿಹಾಸದಲ್ಲಿ ಮಧ್ಯಯುಗೀನ ಕಾಲವನ್ನು ಸಂಘರ್ಷದ ಕಾಲವೆಂದು ಕರೆಯಲಾಗುತ್ತದೆ. ಅದರಲ್ಲಿ ಮೇವಾಡದ ಸಂಸ್ಕೃತಿ, ಜನ ಜೀವನ, ಧರ್ಮಶ್ರದ್ಧೆ ಇವುಗಳನ್ನು ಕುರಿತು ಅಭ್ಯಾಸ ಮಾಡತೊಡಗಿದಾಗ ಅನೇಕ ರೋಮಾಂಚಕಾರಿ ಘಟನೆಗಳು ಗೋಚರಿಸುತ್ತವೆ.

ಹಿಂದೂ ಧರ್ಮದ ಸಂಸ್ಕೃತಿ ಕೇಂದ್ರವಾಗಿ ದಕ್ಷಿಣಭಾರತದಲ್ಲಿ ತಿರುಪತಿಗೆ ಅಗ್ರಸ್ಥಾನವು ದೊರೆತರೆ, ಈ ತಿರುಪತಿಯ ನಂತರ ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಉತ್ತರ ಭಾರತದಲ್ಲಿರುವ ನಾಥದ್ವಾರ ಕ್ಷೇತ್ರವು ದ್ವಿತೀಯ ಸ್ಥಾನವನ್ನು ಹೊಂದಿದೆ. ತಿರುಮಲೆಯ ಶ್ರೀನಿವಾಸನಂತೆ ನಾಥದ್ವಾರದ ಶ್ರೀನಾಥನ ಭಕ್ತರ ಸಂಖ್ಯೆಯು ಗಣನೀಯ ಪ್ರಮಾಣದಲ್ಲಿದೆ.

ಆಂಧ್ರದ ಕಾಕಿನಾಡಾ ನಿವಾಸಿಗಳಾಗಿದ್ದ ಲಕ್ಷ್ಮಣಭಟ್ಟರು ಕುಟಂಬಸಮೇತರಾಗಿ ಉತ್ತರ ಭಾರತದ ಯಾತ್ರೆಯನ್ನಾರಂಭಿಸಿದಾಗ ಚಂಪಾರಣ್ಯದಲ್ಲಿ ಬಿಡಾರ ಮಾಡಿದ್ದರು. ವೈಶಾಖ ಕೃಷ್ಣ ಏಕಾದಶಿ 1535 ರಂದು ಈ ದಂಪತಿಗಳಿಗೆ ಗಂಡು ಮಗು ಹುಟ್ಟಿತು. ಮೃತಾವಸ್ಥೆಯಲ್ಲಿ ಜನಿಸಿದೆ ಎಂಬ ಭಾವನೆಯಿಂದ ಆ ಮಗುವನ್ನು ಎಲೆಯಲ್ಲಿ ಸುತ್ತಿಡಲಾಗಿತ್ತು. ಬೆಳಗೆದ್ದು ನೋಡಿದರೆ ಆ ಮಗುವಿನ ಸುತ್ತಲೂ ದಿವ್ಯಾಗ್ನಿಯು ಕಾಣಿಸುವಂತಾಯಿತು, ಆದುರಿಂದಲೇ ''ವಲ್ಲಭೋಹ್ಯಾಗ್ನಿ ರೂಪಸ್ಯಾತ್'' ಎಂದರು. ಅಗ್ನಿ ದೇವನ ಅಂಶದಿಂದ ಜನಿಸಿದ ಈ ಬಾಲಕನು ಮುಂದೆ ವಲ್ಲಭಚಾರ್ಯರೆಂಬ ಹೆಸರಿನಿಂದ ಖ್ಯಾತರಾಗುವಂತಾಯಿತು.

ಉತ್ತರ ಭಾರತವು ಪುಣ್ಯಪ್ರವಾಹಗಳನಾಡೆನಿಸಿದರೆ ದಕ್ಷಿಣ ಭಾರತವು

ದಾರ್ಶನಿಕರಿಂದ ಸಮಗ್ರ ಭಾರತಕ್ಕೆಲ್ಲ ತಮ್ಮ ಜ್ಞಾನ ಗಂಗೆಯನ್ನು ಹರಿಸಿದ ನಾಡೆಂದು ಕರೆಸಿಕೊಂಡಿದೆ. ಶಂಕರ, ರಾಮಾನುಜ, ಮಾಧ್ವರಂತೆ ವಲ್ಲಭಚಾರ್ಯರಾದರೂ ಕೂಡ ದಕ್ಷಿಣ ಭಾರತದ ಕೊಡುಗೆಯಾಗಿ ಉತ್ತರದಲ್ಲಿ ತಮ್ಮ ಸಿದ್ಧಾಂತದ ಪ್ರಚಾರವನ್ನು ಮಾಡಿದರು.

ಚಂಪಾರಣ್ಯದಲ್ಲಿ ಈ ಮಗು ಜನಿಸಿದಕಾಲಕ್ಕೆ ಸರಿಯಾಗಿ ಮಥುರಾ ವೃಂದಾವನದಲ್ಲಿರುವ ಗಿರಿರಾಜ ಪರ್ವತದಲ್ಲಿ ಶ್ರೀನಾಥ'ನ ಪ್ರಾದುರ್ಭಾವವಾಯಿತು, ಆದುದರಿಂದ ವಲ್ಲಭ ಸಂಪ್ರದಾಯ ವಾದಿಗಳು ಸ್ವಾಮಿ ಹಾಗೂ ಸೇವಕ ಇವರಿಬ್ಬರ ಅವತಾರವಾದುದು ಒಂದೇ ದಿನ ಎಂಬ ನಂಬಿಕೆಯನ್ನಿಟ್ಟುಕೊಂಡು ಬಂದಿದ್ದಾರೆ.

ವಲ್ಲಭಚಾರ್ಯರು ಮಾಧವೇಂದ್ರಪುರಿ ಎಂಬ ಮಹನೀಯರಲ್ಲಿ ಸಕಲಶಾಸ್ತ್ರಗ್ರಂಥಗಳನ್ನು ಅಭ್ಯಾಸಮಾಡಿದರು. ನಂತರ ಸಮಗ್ರ ಭಾರತವನ್ನು ಮೂರುಸಲ ಸಂಚರಿಸಿ ಪುಷ್ಟಿಮಾರ್ಗವನ್ನು ಪ್ರಚಾರಮಾಡಿದರು. ಶಿಷ್ಯಪರಿವಾರವನ್ನು ಸಂಗ್ರಹಿಸಿದರು. ಆಚಾರ್ಯರು ಅಂದು ಮರೆಯಲಾಗದ ಮಹಾ ಸಾಮ್ರಾಜ್ಯವೆನಿಸುತ್ತಿದ್ದ ವಿಜಯನಗರ ಕೃಷ್ಣದೇವರಾಯನ ಆಸ್ಥಾನಕ್ಕೆ ಭೇಟಿಯನಿತ್ತು ತಮ್ಮ ವಿದ್ವತ್ಪ್ರಭೆಯಿಂದ ಪ್ರಭು ಎಂಬ ಗೌರವಕ್ಕೆ ಪಾತ್ರರಾದರೆಂದು ಅವರ ಜೀವನ ಚರಿತ್ರೆಯಿಂದ ತಿಳಿದು ಬರುವುದು.

ಶ್ರೀ ವಲ್ಲಭರು ತಮ್ಮ ಜೀವಿತಕಾಲದಲ್ಲಿ ಎರಡನೆಯ ಸಲ ಭಾರತ ಸಂಚಾರವನ್ನಾರಂಭಿಸಿದಾಗ ಶ್ರೀ ಕೃಷ್ಣನ ಬಾಲ್ಯಜೀವನಲೀಲಾ ವಿನೋದಗಳ ಕೇಂದ್ರವೆನಿಸಿದ ಮಥುರಾ ವೃಂದಾವನ ಗೋಕುಲಗಳಿಗೆ ಭೇಟಿಯನ್ನಿತ್ತರು. ಗೋವರ್ಧನ ಧಾರಿಯಾದ ಸ್ವಾಮಿಯನ್ನು ಕಂಡು ಕೃತಾರ್ಥರಾದರು. ತಿರುಪತಿಯ ಶ್ರೀನಿವಾಸನ ಚರಿತ್ರೆಯಲ್ಲಿ ಹಸು ಹುತ್ತಿನ ಮೇಲೆ ಹಾಲುಗರೆದಂತೆ ಈ ಶ್ರೀನಾಥನ ವಿಗ್ರಹದ ಮೇಲೂ ಪ್ರತಿದಿನ ಹಾಲು ಕರೆಯುತ್ತಿತ್ತೆಂದು ತಿಳಿದುಬರುವುದು. ಆಚಾರ್ಯರು ಶ್ರೀನಾಥನನ್ನೆ ತಮ್ಮ ಆರಾಧ್ಯದೈವವಾಗಿ ಪೂಜಿಸತೊಡಗಿದರು, ಶಿಷ್ಯರಿಗೆಲ್ಲ

ಆತನ ಪೂಜಾವಿಧಾನಗಳ ಪದ್ಧತಿಯನ್ನು ಹಾಕಿಕೊಟ್ಟರು. ನವವಿಧ ಭಕ್ತಿಯೇ ಆ ದೇವನ ಪೂಜೆಯ ಮುಖ್ಯವಾದ ಅಂಗವೆಂಬುದನ್ನು ತೋರಿಸಿಕೊಟ್ಟರು.

ಪಂಜಾಬದ ನಿವಾಸಿಗಳಾದ ಪೂರಣಮಲ್ಲ ಎಂಬುವವರಿಗೆ ಸ್ವಪ್ನದಲ್ಲಿ ಸ್ವಾಮಿಯು ಕಾಣಿಸಿಕೊಂಡು ತಾನು ಗಿರಿವ್ರಜದಲ್ಲಿ ಪ್ರಕಟನಾಗಿದ್ದು ತನಗಾಗಿ ಮಂದಿರವನ್ನು ಕಟ್ಟಿಸುವಂತೆ ಸೂಚನೆಯನ್ನು ಮಾಡಿದ 'ಶ್ರೀ ಕೃಷ್ಣಭಕ್ತರಾದ ಪೂರಣಮಲ್ಲ ವೃಂದಾವನಕ್ಕೆ ಬಂದು ಆಚಾರ್ಯರಿಗೆ ತಮ್ಮ ಸ್ವಪ್ನ ವೃತ್ತಾಂತವನ್ನು ತಿಳಿಸಿ ಅವರಿಂದ ಅಪ್ಪಣೆ ಪಡೆದು ದೇವಮಂದಿರದ ನಿರ್ಮಾಣ ಕಾರ್ಯದಲ್ಲಿ ತೊಡಗಿದರು.

ಗೋವರ್ಧನಧಾರಿಯಾದ ಈ ದೇವನನ್ನು ಮೊದಲು ಬಂಗಾಲಿಗಳು ಪ್ರತಿದಿನವೂ ಅಷ್ಟ ಪೂಜಾ ವಿಧಾನದಿಂದ ಪೂಜಿಸುತ್ತಿದ್ದರು. ಮುಂದೆ ಅವರಲ್ಲಿ ಕೆಲವರು ದೇವಿಯ ಪೂಜೆಯನ್ನೂ ಸಹ ಆರಂಭಿಸಿದರು. ಇದು ಶ್ರೀಕೃಷ್ಣನ ಭಕ್ತರಿಗೆ ಸರಿಬರಲಿಲ್ಲ. ಅವರು ಬಹುಕುಶಲತೆಯಿಂದ ಇವರು ಆಕಾರ್ಯದಿಂದ ಒಲಿಸಿದರು, ಹದಿನೇಳು ವರುಷಗಳಕಾಲ ಅವ್ಯಾಹತವಾಗಿ ಪ್ರಯತ್ನದಿಂದ ಪೂರಣಮಲ್ಲರು ದೇವಮಂದಿರವನ್ನು ನಿರ್ಮಿಸಿದರು, 1564ರ ಕಾಲಾವಧಿಯಲ್ಲಿ ಆ ಮಂದಿರವು ಒಂದು ಹಂತಕ್ಕೆ ಬರುವಂತಾಯಿತು, ನಂತರ ಆಚಾರ್ಯರು ಕಾಶಿಗೆ ಪ್ರಯಾಣ ಮಾಡಿ ಸಂನ್ಯಾಸ ಸ್ವೀಕಾರ ಮಾಡಿದರು, 1638ರ ಸುಮಾರಿನಲ್ಲಿ ಈ ಮಹನೀಯರು ಗಂಗಾ ಪ್ರವಾಹದಲ್ಲಿಯೇ ತಮ್ಮ ದೇಹವನ್ನು ತ್ಯಾಗಮಾಡಿದರು. ಆಗ ಅವರಿಗೆ ಐವತ್ತೆರಡು ವರುಷ ಎರಡು ತಿಂಗಳು, ಏಳುದಿನಗಳಾಗಿದ್ದವೆಂದು ಅವರ ಜೀವನ ಚರಿತ್ರೆಯಿಂದ ತಿಳಿದುಬರುವುದು.

ವಲ್ಲಭಾಚಾರ್ಯರಿಂದ ಪ್ರಣೀತವಾದ ಶುದ್ಧಾದ್ವೈತ ಅಥವಾ ಪುಷ್ಟಿ ಮಾರ್ಗದ ಶಿಷ್ಯವೃಂದವು ದ್ವಾರಕಾ, ಗೊಂಡ, ಕಾಥೆವಾಡ, ಗುಜರಾಥ ಮಗಧ- ಈ ಭಾಗದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬೆಳೆದು ಬರುವಂತಾಗಿತ್ತು.

ಆಚಾರ್ಯರಿಗೆ ಸನ್ಯಾಸಾಶ್ರಮ ಪೂರ್ವದಲ್ಲಿ ಏಳುಜನ ಗಂಡು ಮಕ್ಕಳು ಜನಿಸಿದ್ದರು. ಮುಂದೆ ಈ ಏಳು ಜನರು ಕೋಟಾ, ಕಾಂಕ್ರೋಲಿ, ಗೋಕುಲ ಹಾಗೂ ಕಾಮಾದಲ್ಲಿ ಎರಡು, ಸೂರತದಲ್ಲಿ ಒಂದು ಹೀಗೆ ಏಳು, ಅಧ್ಯಾತ್ಮಪೀಠಗಳನ್ನು ಸ್ಥಾಪಿಸಿ ಪುಷ್ಟಿಮಾರ್ಗದ ಪ್ರಚಾರಕಾರ್ಯದಲ್ಲಿ ನಿರತರಾದರು.

ಶ್ರೀವಲ್ಲಭಾಚಾರ್ಯರ ಕಾಲದಲ್ಲಿ ದಿಲ್ಲೀಶನಾದ ಅಕಬರ ಬಾದಶಹನಿಂದ ಅನೇಕ ದಾನ ಪತ್ರಗಳು ಈ ಪೀಠಕ್ಕೆ ಕೊಡಮಾಡಲ್ಪಟ್ಟಿದ್ದವು, ಮುಂದೆ ಆತನ ಮೊಮ್ಮಗನೆಂದೆನಿಸಿಕೊಂಡ ದಾರಾ ಶುಕೋಹನಂತೂ ಶ್ರೀ ಕೃಷ್ಣನ ಪರಮ ಭಕ್ತನೆಂದು ಗುರುತಿಸಲ್ಪಡುತ್ತಿದ್ದನು. ಈ ಕಾಲಾವಧಿಯಲ್ಲಿಯೇ ಗೀತಾಗ್ರಂಥವು ಫಾರ್ಶಿಭಾಷೆಗೆ ತರ್ಜುಮೆಗೊಂಡಿತು. ದಾರಾ ತನ್ನ ಬೆರಳಿನಲ್ಲಿ "ಪ್ರಭು" ಎಂಬ ಹೆಸರನ್ನು ಕೆತ್ತಿದ ಉಂಗುರವನ್ನು ಧರಿಸುತ್ತಿದ್ದನು, ಹಿಂದೂ ಮಹಮ್ಮದೀಯ ಧರ್ಮದಲ್ಲಿ ಐಕ್ಯವನ್ನು ಸಾಧಿಸಲು ಸಾಗರಸಂಗಮ ಎಂಬ ಗ್ರಂಥವನ್ನು ಸ್ವತಃ ರಚಿಸಿದನು. ಮುಂದೆ ಈ ಗ್ರಂಥವು ಸಂಸ್ಕೃತಭಾಷೆಗೆ ತರ್ಜುಮೆಗೊಳ್ಳುವಂತಾಯಿತು( ಬಿಕಾನೇರಿನ ಸಂಸ್ಕೃತ ಗ್ರಂಥಾಲಯದಲ್ಲಿ ಈ ಗ್ರಂಥವಿದೆ) ಕೇಶವನ ದೇವಮಂದಿರದ ಮುಂಭಾಗದಲ್ಲಿ ಬಂಗಾರದ ಗರುಡಗಂಬವನ್ನು ನಿಲ್ಲಿಸುವಂತೆ ಮಾಡಿದವನು ದಾರಾಶುಕೋಹ ಎಂದೆನಿಸಿಕೊಳ್ಳುತ್ತಾನೆ.

ಔರಂಗಜೇಬನು ಸಾಮ್ರಾಟನಾದ ನಂತರ ಹಿಂದೂ ಧರ್ಮಕ್ಕೆ ದೊಡ್ಡ ಆಡಚಣೆ ಉಂಟಾಯಿತು. ಈ ವಿಪ್ಲವಕಾಲದಲ್ಲಿ ಎಲ್ಲರ ಗಮನವು ಮೇವಾಡದ ರಾಣಾಗಳತ್ತ ಹರಿಯಿತು. ಅವರು ಹಿಂದೂ ಧರ್ಮನಿಷ್ಠ ಪ್ರಭುಗಳೆಂದು ಜಿ ಯಾಕರವನ್ನು ಕೊಡಲು ವಿರೋಧಿಸಿದವರೆಂದೂ ಕರೆಸಿಕೊಳ್ಳುತ್ತಿದ್ದರು. ಇದರಿಂದಾಗಿ ದಿಲ್ಲೀಶ್ವರರರಿಗೆ ಎಂದೂ ತಲೆಬಾಗುವವರಲ್ಲ ಎಂಬ ನಂಬಿಕೆ ಪ್ರಜೆಗಳ ಮನದಲ್ಲಿ ಬೇರೂರುವಂತಾಗಿತ್ತು, ಈ ಎಲ್ಲ ಕಾರಣಗಳಿಂದ ಶ್ರೀನಾಥನ ವಿಗ್ರಹವನ್ನು ಮೇವಾಡದತ್ತ ಸ್ಥಳಾಂತರಿಸುವುದೇ ವಿಹಿತವೆಂಬ ನಿರ್ಧಾರಕ್ಕೆ ಬರುವಂತಾದರು.

ಈ ಎಲ್ಲ ಕಾರ್ಯಗಳು ಅತ್ಯಂತ ವ್ಯವಸ್ಥಿತನಾಗಿ ಗುಪ್ತ ರೀತಿಯಲ್ಲಿಯೇ ನಡೆಯಬೇಕಾಗಿತ್ತು. ಆದುದರಿಂದ ಬಡೆದಾವ್ರೂಜಿಯವರು ಈ ಕಾರ್ಯಕ್ಕಾಗಿ ತಮಗೆ ಅತ್ಯಂತ ವಿಶ್ವಾಸಕರೆಂದೆನಿಸಿದ ಒಂದು ಪಂಗಡವನ್ನೇ ಸಿದ್ಧಪಡಿಸಿಕೊಂಡರು. ಶ್ರೀನಾಥನೊಂದಿಗೆ ಗೋಕುಲದಲ್ಲಿದ್ದ "ನವನೀತ ಪ್ರಿಯಾ" ಎಂಬ ದೇವನನ್ನೂ ಕೂಡ ಸಂಗಡ ತೆಗೆದುಕೊಂಡು ಹೋಗುವುದಾಗಿ ನಿರ್ಧಾರ ಮಾಡಿದರು.

ವ್ರಜಭೂಮಿಯಿಂದ ಹೊರಟ ಈ ಭಕ್ತರ ಗುಂಪು ತಮ್ಮ ದೇವನೊಂದಿಗೆ ಒಂದು ತಿಂಗಳು ಆಗ್ರಾದಲ್ಲಿಯೇ ಕಳೆಯಿತು, ಅನಂತರ ಅವರು ಯಾರಿಗೂ ಸುಳಿವು ಸಿಗದಂತೆ ಚಂಬಲ್ ನದಿಯನ್ನು ದಾಟಿದರು. ಕೃಷ್ಣಕುಮಾರ ಎಂಬ ಸ್ಥಳಕ್ಕೆ ಬಂದು ತಲುಪಿದರು, ನಾಲ್ಕು ತಿಂಗಳು ಅಲ್ಲಿಯೇ ಇದ್ದು ಕೊಂಡು ಮುಂದಿನ ಪ್ರಯಾಣದ ಅಡಚಣೆಗಳನ್ನೆಲ್ಲ ಪರೀಕ್ಷೆಮಾಡಿದ ನಂತರ ಸುರಕ್ಷಿತವಾಗಿದೆ ಎಂದು ತಿಳಿದು ಬಂದಾಗ ಪದ್ಮಶಿಲಾ ಎಂಬ ಸ್ಥಳಕ್ಕೆ ಬಂದರು, ಆ ಸಮಯದಲ್ಲಿ ಅನಿರುದ್ಧ ಹಾಡಾ ಎಂಬುವವನು ರಾಜ್ಯವಾಳುತ್ತಿದ್ದನು. ಆತನು ಪರಿವಾರ ಸಮೇತನಾಗಿ ಬಂದು ಸ್ವಾಮಿಯ ದರ್ಶನವನ್ನು ಪಡೆದುಕೊಂಡು. ಅಲ್ಲಿಯೇ ಸ್ಥಿರವಾಗಿ ನಿಲ್ಲಲು ಕೇಳಿಕೊಂಡನು, ಬಡೇದಾವ್ರೂಜಿಗೆ ಆ ಸ್ಥಳ ಅಗ್ರಾಕ್ಕೆ ಸಮೀಪ ವೆನಿಸಿತು, ಆದುದರಿಂದ ಅವರು ತಮ್ಮ ದೇವನೊಂದಿಗೆ ಪುಷ್ಕರಕ್ಷೇತ್ರಕ್ಕೆ ಬಂದು ತಲುಪಿದರು, ಮುಂದೆ ಜೋಧಪುರ ಮಾರ್ಗವಾಗಿ ಹೊರಟು ಕಿಶನಗಡಕ್ಕೆ ಬಂದು ಬಿಡಾರಮಾಡಿದರು. ಅಲ್ಲಿಂದ ಪುನಃ ಅವರ ಪ್ರಯಾಣವು ಮುಂದುವರಿಯಿತು. ಚೌಪಾಸನಿ ಎಂಬ ಸ್ಥಳಕ್ಕೆ ಬಂದು ಚಾತುರ್ಮಾಸ್ಯ ವ್ರತವನ್ನು ಕಳೆದರು. ಈ ಪ್ರವಾಸದ ಕಾಲಾವಧಿಯಲ್ಲಿಯೂ ಸಹ ದೇವನಿಗೆ ಎಂದಿನಂತೆ ನಿತ್ಯ ಅಷ್ಟಪೂಜಾದಿ ಬೋಗಗಳು ನಡೆಯುತ್ತಿದ್ದವು.

ಗೋವಿಂದ ಮಹಾರಾಜರು ಒಂದು ಸಲ ಮೇವಾಡದ ಮಹಾರಾಣಾ ರಾಜಸಿಂಹರನ್ನು ಬೇಟಿಯಾಗಿ ಬಂದರು. ಮಹಾರಾಜರ ಅಪೇಕ್ಷೆಯಂತೆ ಅವರು ಶ್ರೀನಾಥ'ನೊಂದಿಗೆ ಮೇವಾಡಕ್ಕೆ ಪ್ರಯಾಣಬೆಳೆಸಿದರು.

ದಾರಿಯುದ್ಧಕ್ಕೂ ಪ್ರಜೆಗಳು ಶ್ರೀನಾಥನಿಗೆ ವೈಭವದ ಸ್ವಾಗತವನ್ನು ಕೋರಿ ಉತ್ಸವ ನಡೆಸಿದರು. ''ಸಿಂಹಾಡ'' ಎಂಬ ಸ್ಥಳದಲ್ಲಿ ಈ ಶ್ರೀನಾಥನ ರಥವು ಚಲಿಸದೆ ನಿಂತು ಹೋಯಿತು ಬಹುಕಾಲದ ಹಿಂದೆ (ನೂರಿಪ್ಪತ್ತೈದು ವರುಷಗಳ ಹಿಂದೆ) ಮೇವಾಡದ ಅರಸರ ಸ್ವಪ್ನದಲ್ಲಿ ಶ್ರೀನಾಥನು ತಾನು ಇದೇ ಸ್ಥಾನದಲ್ಲಿ ವಿರಾಜಮಾನನಾಗುವೆ ಎಂಬ ಸೂಚನೆಯನ್ನಿತ್ತಿದ್ದನಂತೆ, ಅದೇ ಸ್ಥಳದಲ್ಲಿ ಬನಾಸನದಿಯು ಉತ್ತರ ವಾಹಿನಿಯಾಗಿ ಮಂದಗತಿಯಿಂದ ಹರಿಯುತ್ತಿತ್ತು. ದಟ್ಟವಾದ ಕಾಡು, ಸುತ್ತಲೂ ಅಭೇದ್ಯವಾದ ಆರಾವಲಿ ಪರ್ವತಗಳು ಕೋಟೆಯಗೋಡೆಗಳಂತೆ ಮೇಲೆದ್ದು ನಿಂತಂತೆ ತೋರುತ್ತಿದ್ದವು. 1728 ಫಾಲ್ಗುಣ ಶುದ್ಧ ಸಪ್ತಮಿಯ ಶುಭದಿನದಂದು ಬಡೇದಾವೂಜಿಯವರಿಂದ (ದಾಮೋದರದಾಸಜಿ) ಶ್ರೀನಾಥನ ವಿಗ್ರಹವನ್ನು ಅದೇ ಸ್ಥಳದಲ್ಲಿ ಪ್ರತಿಷ್ಠಾಪಿಸಲಾಯಿತು. ಕಾಲಾಂತರದಲ್ಲಿ ಶ್ರೀನಾಥನು ಬಂದು ವಾಸಮಾಡಿದ ಈ ತಾಣವನ್ನು ಆತನ ಭಕ್ತರು ''ನಾಥದ್ವಾರ'' ಎಂಬ ಹೆಸರಿನಿಂದ ಕರೆಯತೊಡಗಿದರು.

ವ್ರಜಭೂಮಿಯಿಂದ ಬಂದು ನೆಲೆಸಿದ ಶ್ರೀನಾಥನಿಗೆ 1834ರವರೆಗೆ ಈ ಸ್ಥಳವು ಬಹುಸುರಕ್ಷಿತವೆನಿಸಿತು. ಈ ಕಾಲದಲ್ಲಿ ಸಾಲ್ಕೂ ನಿಟ್ಟನಿಂದ ಶಿಷ್ಯರು, ಭಕ್ತರು, ದೇವನ ದರ್ಶನಾರ್ಥಿಗಳಾಗಿ ಬಂದು ಹೋಗತೊಡಗಿದರು. ಅಷ್ಟಪೂಜಾವಿಧಿಗಳಲ್ಲಿ ದಿನಗಳೆದಂತೆಲ್ಲ ವ್ಯವಸ್ಥಿತ ಕ್ರಮಗಳು ಕಾಣುವಂತಾದವು, ಆದರೆ ಮುಂದೆ ಪೂನಾದ ಪೇಶ್ವೆ ನಾಗಪುರದ ಭೋಸಲೇ ಅವರ ಸರದಾರಾದ ಸಿಂಧೇ ಹೊಳಕರ ಇವರ ಪ್ರಬಾವವು ಉತ್ತರ ಬಾರತದಲ್ಲಿ ಬೆಳೆಯತೊಡಗಿತು, ದೌಲತರಾವ್ ಬಸುವಂತರಾವ್, ಸಿಂಧೆಯ ಮೇಲೆ ಆಕ್ರಮಣವನ್ನು ಮಾಡಿದ, ಯುದ್ಧದಲ್ಲಿಸಿಂಧೆ ಸೋಲಬೇಕಾಯಿತು, ಆತನು ತಲೆಮರೆಸಿಕೊಳ್ಳಲು ಮೇವಾಡಕ್ಕೆ ಆಗಮಿಸಿದ, ಆದರೆ ಸೈನ್ಯವು ಆತನನ್ನು ಬೆನ್ನಟ್ಟಿತು. ಸಿಂಧೆ ತನಗೆ ಮೂರಲಕ್ಷ ರೂಪಾಯಿಗಳನ್ನು ಸಂದಾಯಮಾಡುವಂತೆ ನಾಥದ್ವಾರದ ಅಧಿಕಾರಿಗಳಿಗೆ ಕೇಳತೊಡಗಿದನು. ಈ ಸಮಾಚಾರವು ಮಹಾರಾಣಾ ಭೀಮಸಿಂಹನ ಗಮನಕ್ಕೆ ಬಂದಿತು,

ತಕ್ಷಣವೇ ಕ್ಷೇತ್ರವನ್ನು ರಕ್ಷಿಸಲು ಆತನಿಂದ ಸೇನೆ ಕಳುಹಿಸಲಾಯಿತು. ಈ ವಿಪ್ಲವಕಾಲದಲ್ಲಿ ರಾಣಾ ಶ್ರೀನಾಥನನ್ನು ಉದಯಪುರದ ಸಮೀಪದ ಶ್ರೀಗೊಂದಾ ಎಂಬ ಪರ್ವತದಲ್ಲಿ ಪ್ರತಿಷ್ಠಾಪಿಸುವಂತೆ ನೋಡಿಕೊಂಡನು. ನಾಥದ್ವಾರದಲ್ಲಿರುವಂತೆಯೇ ಈ ಗುಡ್ಡದ ಆಶ್ರಯದಲ್ಲಿ ಭದ್ರವಾದ ದೇವಾಲಯವನ್ನು ಕಟ್ಟಿಸಲಾಯಿತು. ಹತ್ತು ವರುಷಗಳ ಕಾಲ ಶ್ರೀನಾಥನ ವಿಗ್ರಹವನ್ನು ಇದೇ ಸ್ಥಳದಲ್ಲಿಟ್ಟು ಪೂಜೆ ಮಾಡುತ್ತಲಿದ್ದರು, ಮುಂದೆ ವಾತಾವರಣವು ನಿರ್ಮಲವಾದ ನಂತರ ಪುನಃ ನಾಥದ್ವಾರಕ್ಕೆ ಆ ವಿಗ್ರಹವನ್ನು ತಂದು ಪ್ರತಿಷ್ಠಾಪಿಸಲಾಯಿತು.

ಇಂದು ನಾಥದ್ವಾರದಲ್ಲಿ ನಾವು ಕಾಣುವ ಶ್ರೀನಾಥನ ದೇವ ಮಂದಿರಕ್ಕೆ ಭಾರತೀಯ ದೇವಾಲಯಗಳ ಶಿಲ್ಪಕಲಾ ವಿನ್ಯಾಸಗಳಿರುವುದಿಲ್ಲ. ಹೊರನೋಟಕ್ಕೆ ಅದೊಂದು ರಾಜವಾಡೆಯಂತೆಯೇ ಕಾಣಬರುತ್ತದೆ. ಗೋಪುರಗಳಾಗಲಿ ಅಥವಾ ಶಿಲೆಯಲ್ಲಿರುವ ದ್ವಾರಪಾಲಕರ ವಿಗ್ರಹಗಳಾಗಲಿ ನಾವು ಅಲ್ಲಿ ಕಾಣಲಾರೆವು. ಇದಕ್ಕೆ ಮೂಲ ಕಾರಣ ಅಂದಿನ ರಾಜಕೀಯ ಪರಿಸ್ಥಿತಿ ಎಂದೇ ಹೇಳಬೇಕಾಗುವುದು. ಶ್ರೀನಾಥನ ವಿಗ್ರಹವಿದ್ದ ಮಂಟಪದ ಮೇಲ್ಪದಿಯಲ್ಲಿ ಚಕ್ರರಾಜ ಎಂಬ ಹೆಸರಿನ ಗೋಪುರವಿದೆ. ಆದರೆ ಅದು ಹೊರಭಾಗದಿಂದ ಯಾರಿಗೂ ಕಾಣಸಿಗುವುದಿಲ್ಲ, ಆ ಗೋಪುರದಲ್ಲಿ ಸುದರ್ಶನ ಚಕ್ರ ವಿರುವುದರಿಂದ ಅದನ್ನು ಚಕ್ರರಾಜ ಎಂದು ಕರೆಯುತ್ತಾರೆ. ಈ ಚಕ್ರದ ಮೇಲೆ ಏಳು ಧ್ವಜಗಳಿವೆ. ವಲ್ಲಭ ಸಂಪ್ರದಾಯದ ಇನ್ನುಳಿದ ಏಳು ಕೇಂದ್ರಗಳಲ್ಲಿ ಈ ಧ್ವಜವಿರುವುದಿಲ್ಲ. ನಾಥದ್ವಾರ ಪುಷ್ಟಿಮಾರ್ಗದ ಪ್ರಧಾನಕೇಂದ್ರವಾದುದರಿಂದ ಆ ಏಳೂ ಧ್ವಜಗಳನ್ನು ನಾವು ಇಲ್ಲಿಯೇ ಕಾಣಬಹುದು. ಈ ಸ್ಥಳವನ್ನು ಯಾರೂ ಸ್ಪರ್ಶಮಾಡಲಾರದಂತೆ ಬಹು ಶುಚಿಯಾಗಿಟ್ಟಿರುತ್ತಾರೆ. ಹಕ್ಕಿಗಳೂ ಕೂಡ ಅದರ ಮೇಲೆ ಕೂಡಲಾರದಂತೆ ವ್ಯವಸ್ಥೆ ಮಾಡಿದ್ದಾರೆ. ಮೇಲುಭಾಗದವರೆಗೆ ಹೋದ ಯಾತ್ರಿಕರು ದೂರದಿಂದಲೇ ಚಕ್ರರಾಜನ ದರ್ಶನ ಪಡೆದುಕೊಂಡು ಬರುವ ಸಂಪ್ರದಾಯವಿದೆ.

ನಾಥದ್ವಾರ ದೇವ ಮಂದಿರವನ್ನು ಪ್ರವೇಶ ಮಾಡಲು ಮೂರು ಮಾರ್ಗಗಳಿವೆ. ಮೊದಲನೇಯದು ಚೌಪಾಟಿಯಿಂದ ಬರುತ್ತದೆ, ಇದೇ ಮುಖದ್ವಾರವಾಗಿದೆ, ಎರಡನೆಯ ಮಾರ್ಗವು ತಿಲಕಾಯತನ ಅಂದರೆ ವಲ್ಲಭ ಪೀಠಸ್ಥರು ವಾಸ ಮಾಡುವ ಮನೆಯ ಏಳುಭಾಗದಿಂದ ಬರಬಹುದಾಗಿದೆ. ಮೂರನೆಯ ಮಾರ್ಗವನ್ನು ಪ್ರೀತಮ ಪೋಲ ಎಂಬ ಹೆಸರಿನಿಂದ ಕರೆಯುತ್ತಾರೆ, ಇದು ಗರ್ಭಗುಡಿಯ ಹಿಂಭಾಗದಿಂದ ಪಾಕಶಾಲೆಯ ಬದಿಯಲ್ಲಿ ಹಾದುಬರುತ್ತದೆ. ಸಭಾಮಂಟಪದಲ್ಲಿ ನಿಂತುಕೊಂಡೇ ದೇವನದರ್ಶನ ಮಾಡುತ್ತಾರೆ. ಒಳಭಾಗದಲ್ಲಿ ಅರ್ಚಕರು ಹಾಗೂ ತಿಲಕಾಯತನರಿಗೆ ಮಾತ್ರ ಪ್ರವೇಶವಿರುತ್ತದೆ.

ಒಂದು ಬದಿಯಲ್ಲಿ ತಿಲಕಾಯತನರ ವಾಸದ ಬಿಡಾರವಿದ್ದರೆ ಇನ್ನೊಂದು ಬದಿಯಲ್ಲಿ ಪಾಕಶಾಲೆ, ಕ್ಷೀರಶಾಲೆ, ದೇವನಿಗೆ ಭಕ್ತರಿಂದ ಕೊಡಲ್ಪಡುವ ಹೂವು, ಹಣ್ಣು, ಹಾಲು, ಮೊಸರು ಮೊದಲಾದವುಗಳನ್ನು ಶೇಖರಿಸಿಡುವ ಭಾಗಗಳಿವೆ. ಮಧ್ಯ ಭಾಗದಲ್ಲಿ ಶ್ರೀನಾಥನ ವಿಗ್ರಹವಿದೆ. ಆ ವಿಗ್ರಹದ ಮುಂಭಾಗದಲ್ಲಿ ಸಭಾಮಂಟಪವಿದೆ. ಅಲ್ಲಿಯೇ ಎಲ್ಲರಿಗೂ ದರ್ಶನವಾಗುವಂತೆ ವ್ಯವಸ್ಥೆಯನ್ನು ಮಾಡಲಾಗಿದೆ. ತಿರುಪತಿಯಂತೆ ವ್ಯವಸ್ಥೆ ಮಾಡಲಾಗಿದೆ. ತಿರುಪತಿಯಂತೆ ಈ ದೇವನಿಗೂ ಪ್ರತಿದಿನ ಷಡ್ರಸ್ನಾನ ಭೋಜನದ ನೈವೇದ್ಯಗಳಾಗುತ್ತವೆ. ಅವುಗಳನ್ನು ಹೊರಭಾಗದಲ್ಲಿ ನಾವು ಪಡೆದುಕೊಳ್ಳಬಹುದು. ಇಲ್ಲಿಯ ಪದಾರ್ಥಗಳೆಲ್ಲ ಶುದ್ಧ ತುಪ್ಪದಲ್ಲಿಯೇ ಮಾಡಿದವುಗಳಾಗಿರುತ್ತವೆ, ಕೇಶರ ಪಚ್ಚಕರ್ಪೂರ, ಯಾಲಕ್ಕಿ ಮೊದಲಾದವುಗಳನ್ನು ಪುಡಿಮಾಡಲು ಬಂಗಾರದ ಹಾಗೂ ಬೆಳ್ಳಿಯ ಬೀಸುವ ಕಲ್ಲುಗಳಿವೆ. ದೇವನಿಗರ್ಪಿತವಾದ ಹೂಗಳಿಂದ ಸುಗಂಧತೈಲವನ್ನು ತೆಗೆಯುತ್ತಾರೆ, ಗುಲಾಬಿಯನ್ನು ಬೆಳೆಯಲು ಪ್ರತ್ಯೇಕವಾದ ವ್ಯವಸ್ಥೆಯನ್ನೇ ಮಾಡಲಾಗಿದೆ. ಪ್ರತಿ ಅರ್ಧಘಂಟೆಗೊಮ್ಮೆ ಈ ದೇವನ ದರ್ಶನವಾಗುತ್ತದೆ. ಸಮಯ ಸಂದರ್ಭಾನುಸಾರಕ್ಕೆ ತಕ್ಕಂತೆ

ದೇವನನ್ನು ನಾನಾಲಂಕಾರಗಳಿಂದ ಪೂಜೆಮಾಡುತ್ತಾರೆ. ಅದನ್ನು ನೋಡುವುದೇ ಕಣ್ಣುಗಳಿಗೆ ಹಬ್ಬವಾಗುತ್ತದೆ.

ಶ್ರೀ ವಲ್ಲಭಾಚಾರ್ಯರ ಸಿದ್ಧಾಂತವನ್ನು ಶುದ್ಧಾದ್ವೈತ ಇಲ್ಲವೆ, ಪುಷ್ಟಿ ಮಾರ್ಗ ಸಂಪ್ರದಾಯವೆಂದು ಕರೆಯುವುದುಂಟು. ಇವರಿಗೆ ಶ್ರೀ ಕೃಷ್ಣನೇ ಪರಮ ದೈವ. ಅವರಲ್ಲಿ ಅನನ್ಯಭಕ್ತಿಯೇ ಈ ಸಿದ್ಧಾಂತದ ತಿರುಳು, ನಾಮಸೇವೆ, ಸ್ವರೂಪ ಸೇವೆಗಳೆಂಬ ಪ್ರಭೇದಗಳಿವೆ. ತನುಜ ವಿತ್ತಜ ಮಾನಸ ಎಂಬ ಪ್ರಭೇದಗಳಿಂದ ಭಕ್ತನು ದೇವನಲ್ಲಿ ಮೊರೆಯಿಡುತ್ತಾನೆ. ಕರ್ಮಕಾಂಡಕ್ಕೆ ಇವರು ವಿಶೇಷ ಮಹತ್ತ್ವವನ್ನಿತ್ತಿದ್ದಾರೆ.

ಯಮುನಾ ನದಿಯಿಂದಲೇ ಈ ದೇವನಿಗೆ ಅಭಿಷೇಕಕ್ಕಾಗಿ ಜಲವನ್ನು ತರುವ ಸಂಪ್ರದಾಯವಿದೆ. ಉತ್ಸವ ವಿಗ್ರಹವನ್ನು ಮದನ ಮೋಹನಜಿ ಎಂದು ಕರೆಯುತ್ತಾರೆ. ಪೂಜಾಕಾಲದಲ್ಲಿ ಸೂರದಾಸ, ಕೃಷ್ಣದಾಸ, ನಂದದಾಸ ಮೊದಲಾದವರಿಂದ ರಚಿತವಾದ ಭಕ್ತಿಗೀತೆಗಳನ್ನು ರಾಗಬದ್ಧವಾಗಿ ಗಾಯನ ಮಾಡುತ್ತಾರೆ.

ದೇವಮಂದಿರದ ಪ್ರಧಾನಾಧಿಕಾರಿಗಳನ್ನು ತಿಲಕಾಯತನರೆಂದು ಕರೆಯುತ್ತಾರೆ, ಇವರು ವಲ್ಲಭಚಾರ್ಯರ ಪೂರ್ವಾಶ್ರಮ ಸಂತಾನರಾಗಿರುತ್ತಾರೆ, ಗೋಸ್ವಾಮಿಜಿ ಎಂದು ಗೌರವ ಸೂಚಕಪದವೂ ಬಳಕೆಯಲ್ಲಿದೆ. ದೇವಾಲಯದ ಕಾರ್ಯನಿರ್ವಹಣೆಗಾಗಿ ರಾಜಸ್ತಾನ ಸರಕಾರದವರು ವಿಶ್ವಸ್ಥ ಸಮಿತಿಯನ್ನು ರಚಿಸಿದ್ದಾರೆ, ಅಧ್ಯಕ್ಷರು ಮಾತ್ರ ತಿಲಕಾಯತನರೇ ಆಗಿರುತ್ತಾರೆ. ಸರಕಾರದವತಿಯಿಂದ ಐ.ಎ.ಎಸ್. ಅಧಿಕಾರಿಗಳೊಬ್ಬರು ಇರುತ್ತಾರೆ.

ನಾಥದ್ವಾರ ಇಂದು ಸುಮಾರು ಮೂವತ್ತು ಸಾವಿರ ಜನವಸತಿಯಿಂದ ಕೂಡಿದುದಾಗಿದೆ, ಇಲ್ಲಿ ನಡೆಯುವ ಹೋಳಿಹಬ್ಬ, ಕೃಷ್ಣಜನ್ಮಾಷ್ಟಮಿ, ಅನ್ನಕೂಟ, ಶ್ರಾವಣಮಾಸದ ಉತ್ಸವಗಳು, ವರ್ಷಾರಂಭದ ಉತ್ಸವ, ದೀಪಾವಳಿ ಮೊದಲಾದ ಸಂದರ್ಭಗಳಲ್ಲಿ ಲಕ್ಷಾಂತರ ಸಂಖ್ಯೆಯಲ್ಲಿ ಭಕ್ತರು

ಬಂದು ಸೇರುತ್ತಾರೆ, ತಕ್ಕಮಟ್ಟಿಗೆ ಯಾತ್ರಾರ್ಥಿಗಳಿಗೆ ಬಿಡಾರದ ವ್ಯವಸ್ಥೆಗಳನ್ನು ಮಾಡಿದ್ದಾರೆ, ದೇವಸ್ಥಾನಕ್ಕೆ ಸೇರಿದ ಗೋಶಾಲೆ ತುಂಬ ದೊಡ್ಡದು, ಗಣನೀಯ ಸಂಖ್ಯೆಯಲ್ಲಿ ಗೋವುಗಳನ್ನು ನಾವು ಇಲ್ಲಿ ಕಾಣಬಹುದು.

ನಾಥದ್ವಾರವು ಚಿತ್ರಕಲೆಯಲ್ಲಿ ತನ್ನದೇ ಆದ ಸ್ಥಾನವನ್ನುಳಿಸಿಕೊಂಡು ಬಂದಿದೆ. ಶ್ರೀ ಕೃಷ್ಣನ ನಾನಾವಿಧ ರೂಪಗಳನ್ನು ಬಹುಚೆನ್ನಾಗಿ ಚಿತ್ರಿಸಿದ್ದಾರೆ. ವಿಶೇಷವಾಗಿ ರಾಸಕ್ರೀಡಾಚಿತ್ರಗಳು ದೇಶ ವಿದೇಶಗಳಲ್ಲಿಯೂ ಬೇಡಿಕೆಯನ್ನು ಹೊಂದಿವೆ. ನರೋತ್ತಮನಾರಾಯಣ, ಭೂಕಾಲಾಲ, ಮೊದಲಾದವರ ಚಿತ್ರಗಳು ಪ್ರಖ್ಯಾತಿಯನ್ನುಗಳಿಸಿವೆ. ಚಿತ್ರಕಲೆಯಂತೆ ಬೆಳ್ಳಿ, ಬಂಗಾರದ ಕುಸುರಿನ ಕೆತ್ತನೆಯ ಕಾರ್ಯದಲ್ಲಿಯೂ ಇಲ್ಲಿಯ ಕಾರ್ಮಿಕರು ಹೆಸರುವಾಸಿಗಳಾಗಿದ್ದಾರೆ. ಸಂಗೀತದಲ್ಲಿಯೂ ನಾಥದ್ವಾರ ಹಿಂದೆ ಬಿದ್ದಿಲ್ಲ. ಪುರುಷೋತ್ತಮದಾಸರ ಕಾರ್ಯಕ್ರಮವು ಆಗಾಗ ಬಾನುಲಿಯಿಂದ ಕೇಳಬಹುದಾಗಿದೆ. ಬಟ್ಟೆಗಳಿಗೆ ನಾನಾತರಹದ ಬಣ್ಣ ಹಾಕುವುದು ಹಾಗೂ ಸಿಹಿತಿಂಡಿಗಳನ್ನು ಮಾಡುವುದರಲ್ಲಿ ನಾಥ'ದ್ವಾರದ ಜನರು ಬಹುಖ್ಯಾತರಾಗಿದ್ದಾರೆ. ಇಲ್ಲಿಯ ಗುಲಾಬಿನ ನೀರು ಹಾಗೂ ಅತ್ತರುಗಳು ಜಗದ್ವಿಖ್ಯಾತಿಯನ್ನು ಗಳಿಸಿವೆ.

ವಲ್ಲಭ ಸಂಪ್ರದಾಯವಾದಿಗಳಿಗೆ ನಾಥದ್ವಾರ ಕೈಲಾಸಪುರ, ಚಾರಭುಜ, ಸೇವಂತ್ರಿ, ಕೇಸರಿ ಯಾನಾಥ' ಇವು ಪ್ರಮುಖ ಯಾತ್ರಾಸ್ಥಳಗಳಾಗಿವೆ. ನಾಥದ್ವಾರಕ್ಕೆ ಹೋಗಲು ಅಹಮದಾಬಾದ್ ದಿಲ್ಲಿಯ ಮಾರ್ಗ ಮೇವಾಡದ ಜಂಗ್‌ಷನ್ನಿನಿಂದ ಇನ್ನೊಂದು ಮಾರ್ಗವು ಅಜಮೇರ್ ಖಾಂಡವಾ ಮಾರ್ಗವಾಗಿ ಚಿತ್ತೋಡದಿಂದ ಹೋಗಬಹುದಾಗಿದೆ. ಸ್ಟೇಷನ್‌ನ್ನಿಂದ ಹನ್ನೆರಡು ಕಿಲೋಮೀಟರ್ ದೂರದಲ್ಲಿ ಈ ಕ್ಷೇತ್ರವಿದೆ. ಬಸ್ಸಿನ ಸೌಕರ್ಯವು ಸಾಕಷ್ಟು ಪ್ರಮಾಣದಲ್ಲಿದೆ. ಜಯಪುರದಿಂದ ಈ ಕ್ಷೇತ್ರವು ನಲ್ವತ್ತೆಂಟು ಕಿ.ಮೀ. ದೂರದಲ್ಲಿದೆ.

ವರ್ಷಾಋತುವಿನಲ್ಲಿ ಈ ಕ್ಷೇತ್ರದ ದರ್ಶನ ಮಾಡುವುದರಿಂದ ಪ್ರವಾಸಿಯ ಮನಸ್ಸಿಗೆ ಸುತ್ತಲಿನಪರಿಸರದಿಂದಾಗಿ ಹೊಸ ಉತ್ಸಾಹವು ಕಾಣುವಂತಾಗುತ್ತದೆ.

ಶ್ರೀ ಕೃಷ್ಣನ ಜೀವನದಂತೆ ಆತನ ವಾಸಸ್ಥಳವೆನಿಸಿದ ನಾಥ್‌ದ್ವಾರವಾದರೂ ಕೂಡ ಅನೇಕ ಮಹತ್ತ್ವಗಳಿಂದ ಕೂಡಿದ ಕ್ಷೇತ್ರವೆನಿಸುತ್ತದೆ.

# ಶ್ರೀಮದುತ್ತರಾದಿಮಠದ ಸಂಪತ್ತಿನ ವೈಭವ

ಶ್ರೀಮದುತ್ತರಾದಿಮಠದ ಯತಿಗಳ ಪರಂಪರೆಯನ್ನು ಸೂಚಿಸುವಂತಹ ಒಂದು ಗ್ರಂಥವಿದ್ದು ಅದನ್ನು "ಸತ್ಕಥಾ" ಎಂದು ಕರೆಯಲಾಗಿದೆ. ಈ ಗ್ರಂಥದಲ್ಲಿ ಸತ್ಯವಿಜಯತೀರ್ಥರ ವಿಚಾರವೂ ಕಾಣಸಿಗುತ್ತದೆ. ಇವರು 1735ರ ನಂತರ ಪಟ್ಟಕ್ಕೆ ಬಂದವರು. ಮುಂದೆ ಸತ್ಯಪರಾಕ್ರಮರು 1874ರಲ್ಲಿದ್ದವರು. ಇವರು ಸಾತಾರೆಯ ಹತ್ತಿರದಲ್ಲಿರುವ ಕೃಷ್ಣಾತೀರದ ವಾಯಿ ಎಂಬ ಸ್ಥಳದವರು. ಈ ಗ್ರಂಥವು ಸುಮಾರು 75 ವರುಷಗಳ ಹಿಂದೆ ಮುದ್ರಿತವಾಗಿ ಸರ್ವರ ಕೈಗೆ ದೊರೆಯುವಂತಾಗಿದೆ. ಶ್ರೀಮಠದಲ್ಲಿ ಲಭ್ಯವಾದ ಕಾಗದ ಪತ್ರಗಳ ಆಧಾರದಿಂದ ಈ ಗ್ರಂಥವು ರಚಿತವಾಗಿರಬಹುದು. ಇದರಲ್ಲಿ ಸತ್ಯವರತೀರ್ಥರ ಚರಿತ್ರೆಯೂ ಇದೆ. ಇವರ ಕಾಲವು 1798 ರಿಂದ 1880. ಈ ಮಹಾನುಭಾವರನ್ನು ಪೂಣೆಯ ಶ್ರೀಮಂತ ಪೇಶ್ವೆ ಎರಡನೆಯ ಬಾಜೀರಾಯನು ತಾನಾಗಿ ಬಂದು ಭೇಟಿಯಾದ ಉಲ್ಲೇಖವು ಈ ಗ್ರಂಥದಲ್ಲಿ ಕಾಣಸಿಗುತ್ತದೆ.

ಶ್ರೀಮಠವು ಸಂಚಾರತ್ವೇನ ಉತ್ತರಭಾರತದ ಕಡೆಗೆ ಪ್ರಯಾಣ ಹೊರಟಿತು. ಪಂಢರಪುರ ಕ್ಷೇತ್ರದಲ್ಲಿ ಅನೇಕ ಗೃಹಸ್ಥರು ಬಂದು ಶ್ರೀಮಠದ ಶಿಷ್ಯತ್ವವನ್ನು ಸ್ವೀಕರಿಸಿದರು. ನಂತರ ಶ್ರೀಮಠವು ಪೇಶ್ವೆಯವರ ರಾಜಧಾನಿಯೆನಿಸಿದ ಪೂಣೆ ನಗರಕ್ಕೆ ಆಗಮಿಸಿತು. ಆ ಸಮಯದಲ್ಲಿ ಎರಡನೇ ಬಾಜೀರಾವ ಪೇಶ್ವೆಪದವನ್ನಲಂಕರಿಸಿದ್ದನು. ಶ್ರೀಗಳವರ ಕೀರ್ತಿಯು ಆತನ ಕಿವಿಯವರೆಗೆ ತಲುಪಿತ್ತು. ಆದುದರಿಂದ ಈ ಪೂಜ್ಯರನ್ನು ಅತ್ಯಂತ ಸನ್ಮಾನಪೂರ್ವಕ ಸ್ವಾಗತಿಸಿ ಅವರನ್ನು ಕರೆತರಲು ಸರದಾರ್ ಘೋರ್ಪಡೆಯವರನ್ನು ನಿಯುಕ್ತಿಗೊಳಿಸಿದನು. ಶ್ರೀಗಳವರು ತಮ್ಮ ಶಿಷ್ಯ

ಪರಿವಾರ ಸಮೇತರಾಗಿ ಒಂದು ತಿಂಗಳವರೆಗೆ ಪುಣೆ ನಗರದಲ್ಲಿ ಬಿಡಾರ ಮಾಡಿದ್ದರು. ಆ ಸಮಯದಲ್ಲಿ ಶ್ರೀಮಂತ ಬಾಜೀರಾವ ಪೇಶ್ವೆ ಹಾಗೂ ಆತನ ಇನ್ನುಳಿದ ಸರದಾರರು ಮನಃಪೂರ್ವಕವಾಗಿ ಶ್ರೀಮಠದ ಸೇವೆಯನ್ನು ಮಾಡಿದರಲ್ಲದೆ ಶ್ರೀಮಠಕ್ಕೆ ಅನೇಕ ದಾನಧರ್ಮಾದಿಗಳನ್ನೀಯಲಾಯಿತು. ಅಂದು ಪೇಶ್ವೆಯವರಿಂದ ದಾನವಾಗಿ ದೊರೆತ ನಗನಾಣ್ಯಗಳ ವಿವರವು ನೂರಾರುಕಾಗದ ಪತ್ರಗಳಿಂದ ಈ ರೀತಿಯಾಗಿ ತಿಳಿದುಬರುವದು.

1 ಲಕ್ಷ ಲಕ್ಷ್ಮೀವರಹಗಳು ಅಲ್ಲದೆ ಬೇರೆ ಬಂಗಾರದ ನಾಣ್ಯಗಳು. ಮಕರ ಕಂಠೀಹಾರ 1, ಮುತ್ತಿನ ಹಾರ 1, ಎರಡು ಮಣ ಬಂಗಾರದ ಮಂಟಪ. ಇಂದಿಗೂ ಇವುಗಳನ್ನು ಶ್ರೀಮಠಪದಲ್ಲಿ ನಾವು ಕಾಣಬಹುದು. ಅಂಬಾರಿಗಳಿಂದ ಕೂಡಿದ ನಾಲ್ಕು ಆನೆಗಳು ಹಾಗೂ ಜಾತಿವಂತ ಇಪ್ಪತ್ತೈಕುದುರೆಗಳು. ಇವುಗಳನ್ನಲ್ಲದೆ ಮಠದೊಂದಿಗಿದ್ದ ಪಂಡಿತರಿಗೂ ಸಹ ಅವರವರ ಯೋಗ್ಯತಾನುಸಾರವಾಗಿ ಸನ್ಮಾನವನ್ನು ಮಾಡಲಾಯಿತು. ಅಷ್ಟೇ ಅಲ್ಲದೇ ಸತ್ಯಧರ್ಮಸ್ವಾಮಿಗಳ ಪೂರ್ವಾಶ್ರಮದ ಮಕ್ಕಳಿಗೆ ಬಂಗಾರದ ಕಡಗ ಹಾಗೂ ಮುತ್ತಿನ ಕರ್ಣಕುಂಡಲಗಳು ಮತ್ತು ಶಿರಪೇಚ ಮೊದಲಾದ ಅಲಂಕಾರಗಳನ್ನೀಯಲಾಯಿತೆಂದು ತಿಳಿದು ಬರುವದು.

ಸತ್ಯಧರ್ಮತೀರ್ಥರು ಪುಣೆಯಿಂದ ಪಂಚವಟಿಗೆ ಆಗಮಿಸಿದರು. ಅಲ್ಲಿರುವ ಶ್ರೀರಾಮ ಮಂದಿರದಲ್ಲಿ ಬಿಡಾರ ಮಾಡಿದರು. ಆಗ ಒಂದು ದಿವಸ ಸ್ವಪ್ನದಲ್ಲಿ 'ನೀವು ಇನ್ನು ದಕ್ಷಿಣಕ್ಕೆ ಹೊರಡಿರಿ' ಎಂದು ಪ್ರಭು ಶ್ರೀರಾಮಚಂದ್ರನು ಅಪ್ಪಣೆ ಮಾಡಿದನು. ಆಗ ಶ್ರೀಗಳವರು ತ್ರ್ಯಂಬಕೇಶ್ವರಕ್ಕೆ ಬಂದು ಮಹದೇವನ ದರ್ಶನಮಾಡಿಕೊಂಡು ಕೊಲ್ಹಾಪುರಕ್ಕೆ ದಿಗ್ವಿಜಯ ಮಾಡಿದರು. ಕೊಲ್ಹಾಪುರದ ಮಹಾರಾಣಿ ಶ್ರೀಮಠವನ್ನು ಬಹು ವೈಭವದಿಂದ ಸ್ವಾಗತಿಸಿದಳು. ಶ್ರೀಮಠದ ಸೇವೆಗೈದ ಮಹಾರಾಣಿಯು ಮಠಕ್ಕೆ ನಗನಾಣ್ಯಗಳನ್ನು ದಾನ ಮಾಡಿದಳು. 1. ಹತ್ತುಸಾವಿರ ಲಕ್ಷ್ಮೀ ವರಹ, ಬಂಗಾರದ ನಾಣ್ಯಗಳು, 2. ನಾಲ್ಕು ಕಲಶಗಳಿಂದ ಕೂಡಿದ ಬಂಗಾರದ ಪಲ್ಲಕ್ಕಿ 3. ಅನೇಕ ಬಗೆಯ ರತ್ನಾಲಂಕಾರಗಳು, 4. ಬೆಳ್ಳಿ

ಬಂಗಾರದ ಆಭರಣಗಳಿಂದ ಅಲಂಕೃತವಾದ ಎರಡು ಆನೆಗಳು, 5. ಹತ್ತು ಜಾತಿವಂತ ಕುದುರೆಗಳು ಅಲ್ಲದೆ ಬಂಗಾರದ ಅನೇಕ ತಟ್ಟೆ ಪಾತ್ರೆ ಮೊದಲಾದವುಗಳನ್ನು ಧಾರಾಪೂರ್ವಕ ದಾನ ಮಾಡಲಾಯಿತು.

ಶ್ರೀಮಠವು ದಕ್ಷಿಣದಲ್ಲಿ ಪ್ರವಾಸವನ್ನಾರಂಭಿಸುವುದರಿಂದ ಅವರ ಆಗಮನ ವಾರ್ತೆಯನ್ನು ಕರವೀರಪುರದವರು ಮೊದಲೇ ಮೈಸೂರಿನ ಪ್ರಭುಗಳಿಗೆ ತಮ್ಮ ದೂತರ ಮುಖಾಂತರ ತಲುಪುವಂತೆ ಏರ್ಪಾಟು ಮಾಡಿದ್ದರು. ಪ್ರಯಾಣ ಕಾಲದಲ್ಲಿ ಶ್ರೀಮಠಕ್ಕೆ ಯಾವುದೇ ರೀತಿಯಲ್ಲಿ ತೊಂದರೆಗಳಾಗದಂತೆ ನೋಡಿಕೊಳ್ಳಬೇಕೆಂದು ಕರವೀರಪುರದ ಪ್ರಭುಗಳು ಮಾರ್ಗದಲ್ಲಿರುವ ತಮ್ಮ ಸರದಾರರಿಗೆಲ್ಲ ಪೂರ್ವಭಾವಿಯಾಗಿ ತಿಳಿಸುವ ಏರ್ಪಾಟನ್ನು ಮಾಡಿದ್ದರು.

ಶ್ರೀಮಠವು ಮೈಸೂರನ್ನು ತಲುಪಿತು. ಹದಿನೈದು ದಿನಗಳ ಕಾಲ ಮೈಸೂರಿನಲ್ಲಿಯೇ ಬಿಡಾರಮಾಡಿದ್ದರು. ಆಗ ದಿವಾನ್ ಪೂರ್ಣಯ್ಯನವರು ಶ್ರೀ ಪಾದಂಗಳವರಲ್ಲಿ ಈ ರೀತಿ ಪ್ರಾರ್ಥನೆ ಸಲ್ಲಿಸಿದರು.

''ಪೂಜ್ಯರಾದ ತಾವು ಇನ್ನು ಮೇಲೆ ಬಹುಕಾಲ ಮೈಸೂರು ರಾಜ್ಯದಲ್ಲಿ ಇದ್ದು ಕೊಂಡು ಪ್ರಭುಗಳ ಕ್ಷೇಮ ಚಿಂತನೆ ಮಾಡುತ್ತಾ ಹೊಳೆನರಸೀಪುರ ಎಂಬ ಸ್ಥಳದಲ್ಲಿರಬೇಕು ಎಂದು ಪ್ರಭುಗಳ ಅಪೇಕ್ಷೆಯಿರುವುದು. ಈ ಮೊದಲೇ ವೇದವ್ಯಾಸ ತೀರ್ಥರಿಗಾಗಿ ನಿರ್ಮಿಸಿಕೊಡಲಾಗಿದ್ದ ಮಠದಲ್ಲಿ ತಮಗೆ ಅನುಕೂಲವಾಗುವಂತೆ ಏರ್ಪಾಟನ್ನು ಮಾಡಿಕೊಡಲಾಗುವುದು. ತಾವು ಅಲ್ಲಿಯೇ ಇದ್ದುಗೊಂಡು ಪಾಠ ಪ್ರವಚನ ಕಾರ್ಯದಲ್ಲಿ ನಿರತರಾಗಬೇಕು. ಆಗಾಗ ಸ್ವತಃ ಬಂದು ತಮ್ಮ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಬರುವೆವು. ಈ ಮೊದಲಿನ ಮಠದ ಜೀರ್ಣೋದ್ಧಾರ ಕಾರ್ಯಕ್ಕಾಗಿ ಇಪ್ಪತ್ತು ಸಾವಿರ ಬಂಗಾರದ ಮೊಹರುಗಳನ್ನು ಕೊಡಲಾಗುವುದು. ಶ್ರೀ ಮಠದಲ್ಲಿ ನಗಾರಿ, ನೌಬತ್ತು ಮೊದಲಾದ ಸೇವೆಗಳು ತಪ್ಪದೇ ಸಾಗುವಂತಾಗುವ ವ್ಯವಸ್ಥೆ ಮಾಡಲಾಗುವದು. (ಕಾ

1810) ಇದಲ್ಲದೆ ಶ್ರೀಮಠಕ್ಕೆ ಅನೇಕ ವರ್ಷಾಸನಗಳೊಂದಿಗೆ ಧನಕನಕಾದಿಗಳನ್ನೂ ದಾನ ಮಾಡಲಾಗುವದು."

ದಿವಾನ ಪೂರ್ಣಯ್ಯನವರು ತಮ್ಮ ದಿವಾನ ಪದವಿಯನ್ನು ತ್ಯಜಿಸಿ ಶ್ರೀರಂಗಪಟ್ಟಣದಲ್ಲಿ ವಾಸಮಾಡತೊಡಗಿದರು.

ಒಂದು ದಿನ ಇದ್ದಕ್ಕಿದ್ದಂತೆ ಹೊಳೆನರಸೀಪುರದ ಮಠವು ಬೆಂಕಿಗಾಹುತಿಯಾಯಿತು. ಸುಮಾರು ಎಂಟು ದಿನಗಳ ಕಾಲ ಅದು ಉರಿಯುತ್ತಲಿತ್ತು. ಬಹು ಪರಿಶ್ರಮದಿಂದ ಶ್ರೀಗಳವರನ್ನು ಹಾಗೂ ಹಿರಿಯ ಉಗ್ರಾಣವನ್ನೂ ಹೊರತೆಗೆಯಲಾಯಿತು. ಆ ದಳ್ಳುರಿಗೆ ಸಿಕ್ಕು ಶ್ರೀಮಠದ ಅನೇಕ ಮೌಲಿಕ ಪದಾರ್ಥಗಳು ಭಸ್ಮವಾಗಿ ಹೋದವು. ಎಲ್ಲಕ್ಕೂ ಹೆಚ್ಚಿನ ಸಂಗತಿಯೆಂದರೆ ಶ್ರೀಮಠದ ಅನೇಕ ಮಹತ್ವಪೂರಿತ ಕಾಗದ ಪತ್ರಗಳೂ ನಾಶವಾದವು. ಬಹು ದೊಡ್ಡ ಗ್ರಂಥ ಭಂಡಾರವನ್ನು ಕಳೆದು ಕೊಳ್ಳಬೇಕಾಯಿತು.

ಆ ಕಾಲದಲ್ಲಿ ಮೈಸೂರಿನಲ್ಲಿ ಬಾಬುರಾವ ಎಂಬ ದಿವಾನರಿದ್ದರು. ಅವರು ಆ ದಾರುಣ ವಾರ್ತೆಯನ್ನು ಕೇಳಿದಾಕ್ಷಣ ಹೊಳೆನರಸೀಪುರಕ್ಕೆ ಧಾವಿಸಿ ಬಂದು ಶ್ರೀಗಳವರ ದರ್ಶನ ಪಡೆದರು. ಶ್ರೀ ಮಠದ ಪುನರುಜ್ಜೀವನಕ್ಕಾಗಿ ತಾವು ಎಲ್ಲ ರೀತಿಯಿಂದಲೂ ವ್ಯವಸ್ಥೆ ಮಾಡಿ ಕೊಡುವದಾಗಿ ಭರವಸೆಯನ್ನಿತ್ತರಲ್ಲದೆ ಶ್ರೀಮಠಕ್ಕಾಗಿರುವ ಎಲ್ಲ ಬಗೆಯ ಹಾನಿಯನ್ನು ತುಂಬಿಕೊಡುವಂತೆ ನೋಡಿಕೊಂಡರು.

# ವೆಂಕಟಾದ್ರಿ ಸಮಂ ಸ್ಥಾನಂ

ಜಗದ್ವಂದ್ಯನಾದ ಶ್ರೀನಿವಾಸನ ಲೀಲಾವಿನೋದಗಳನ್ನು ಕುರಿತು ಅರಿತುಕೊಳ್ಳಬೇಕಾದರೆ ಮೊದಲು ಪತಿಪತ್ನಿಯರ ಅಂತರಂಗವನ್ನು ಕುರಿತು ಅಭ್ಯಾಸ ಮಾಡುವುದು ವಿಹಿತ. ತಪಸ್ವಿಗರಾದ ಋಷಿಮುನಿಗಳು ತಮ್ಮ ಹೋಮ ಹವನಗಳ ಹವಿಸ್ಸನ್ನು ಯಾರಿಗೆ ಸಮರ್ಪಿಸಬೇಕೆಂಬ ವಿಚಾರವು ತಲೆದೋರಿದಾಗ ಅಂದು ನಡೆದ ಘಟನೆಗಳೇ ಕಾಲಾಂತರದಲ್ಲಿ ಭೂಲೋಕದಲ್ಲಿ ವೈಕುಂಠದ ನಿರ್ಮಾಣಕ್ಕೆ ಕಾರಣವೆನಿಸುವಂತಾದವು.

ಸತ್ಯಲೋಕ, ಕೈಲಾಸಗಳಿಗೆ ಭೇಟಿಯನ್ನಿತ್ತ ತಪಸ್ವಿ ವೈಕುಂಠಕ್ಕೆ ಆಗಮಿಸುತ್ತಾನೆ. ಆತ ಸಾಮಾನ್ಯನಲ್ಲ. ಮಹಾಕೋಪಿ. ವೈಕುಂಠದಲ್ಲಿಯೂ ಆತನಿಗೆ ಸರಿಯಾದ ಮನ್ನಣೆಯು ಲಭಿಸಲಿಲ್ಲ. ಅನಾಯಾಸವಾಗಿ ಕೋಪಕ್ಕೆ ಬಲಿಯಾದ ಆತನು ಶ್ರೀಮನ್ನಾರಾಯಣನ ಹೃದಯಕ್ಕೆ ತಾಡನ ಮಾಡಿದ. ಭಕ್ತನ ಪಾದಕ್ಕೆ ಎಲ್ಲಿ ನೋವಾಯಿತೇನೋ ಎಂದು ಕ್ಷೀರಸಾಗರಶಾಯಿಯು ಆತನಿಗೆ ಅರ್ಘ್ಯಪಾದ್ಯಾದಿ ಪೂಜೆಗೈದು ಆತನ್ನು ಸಮಾಧಾನಪಡಿಸಿದ. ತನ್ನ ಸಮ್ಮುಖದಲ್ಲಿಯೇ ಇದೆಲ್ಲ ನಡೆದುದನ್ನು ಕಂಡ ಶ್ರೀದೇವಿಯು ಪತಿಯ ಮೇಲೆ ಕೋಪಗೊಂಡು ಭೂಲೋಕದ ಕರವೀರಪುರಕ್ಕೆ ಬಂದು ನೆಲೆಸತೊಡಗಿದಳು.

**ವೆಂಕಟಾಚಲವೇ ವೈಕುಂಠವಾಯಿತು :**

ಅರ್ಧಾಂಗಿಯೇ ಇಲ್ಲವೆಂದಾಗ ಶ್ರೀನಿವಾಸನಿಗೆ ವೈಕುಂಠವು ಬೇಡವೆನಿಸಿತು. ಕ್ಷೀರಸಾಗರವನ್ನು ತೊರೆದ ಆತನು ಸಪ್ತಗಿರಿಯ ಮಧ್ಯಪ್ರದೇಶವೆನಿಸಿದ ವಂಕಟಗಿರಿಗೆ ಬಂದು ತಿಂತ್ರಿಣಿ ವೃಕ್ಷದ ಆಶ್ರಯ

ಪಡೆದುಕೊಂಡನು. ವಿರಹಿಯಂತೆ ಕಾಡುಮೇಡುಗಳನ್ನು ಸಂಚರಿಸತೊಡಗಿದನು. ಭೂಲೋಕದ ಈ ನಿಸರ್ಗವೇ ಆತನಿಗೆ ಆಗ ವೈಕುಂಠವೆಂಬ ಭಾವನೆ ಮೂಡಿತು.

ಒಂದು ದಿನ ಆಕಸ್ಮಿಕವೆಂಬಂತೆ ತ್ರಿಲೋಕ ಸುಂದರಿಯೊಬ್ಬಳನ್ನು ಕಂಡ. ಆತನು ಅವಳ ಇತಿಮಿತಿಗಳನ್ನರಿಯಲು ಹಂಬಲಿಸಿದನು. ಆಕೆಯ ಸಖಿಯರು ತೂರಿದ ಕಲ್ಲುಗಳಿಂದ ಗಾಯಗೊಂಡು ಪುಷ್ಕರಿಣಿಯತ್ತ ಮರಳಿದ. ಆದರೆ ನಿಸರ್ಗವು ಮಾತ್ರ ಸುಮ್ಮನಿದ್ದೀತೇ? ಇಬ್ಬರ ಹೃದಯದಲ್ಲಿ ಅನುರಾಗದ ಮಿಂಚಿನ ಹೊಳೆ ಹರಿಯುವಂತೆ ನೋಡಿಕೊಂಡಿತು.

ಪದ್ಮಾವತಿಯು ಸಾಮಾನ್ಯ ಕನ್ಯೆಯಾಗಿರದೆ ಆಕಾಶರಾಜ ಹಾಗೂ ಧರಣೀದೇವಿ ಇವರ ಏಕಮಾತ್ರ ಪುತ್ರಿಯಾಗಿದ್ದಳು. ಕಾಡಿನಿಂದ ಮರುಳಿದ ಮಗಳು ಕಾಮಜ್ವರದ ಬಾಧೆಯಿಂದ ಬಳಲತೊಡಗಿದಳು. ಶ್ರೀನಿವಾಸನಿಗೂ ಅವಳನ್ನು ಮತ್ತೊಮ್ಮೆ ನೋಡಬೇಕೆಂಬ ಹಂಬಲವಾಯಿತು. ಆತನು ಕಿರಾತನ ಪತ್ನಿಯಂತೆ ವೇಷ ಧರಿಸಿ ಅರಮನೆಯನ್ನು ಪ್ರವೇಶ ಮಾಡಿದನು. ಧರಣೀದೇವಿಗೆ ತನಗನುಕೂಲವಾದ ರೀತಿಯಲ್ಲಿ ಕಣಿಯನ್ನು ಹೇಳಿದ. ಎಲ್ಲರನ್ನೂ ತನ್ನಂತೆ ಮಾಡಿಕೊಂಡು. ಕೊನೆಗೊಮ್ಮೆ ಬೆಟ್ಟದ ನಿವಾಸಿಯೊಂದಿಗೆ ಪದ್ಮಾವತಿಯ ವಿವಾಹವು ನಿಶ್ಚಿತವಾಯಿತು.

ವಿವಾಹವೆಂದರೆ ಸಾಮಾನ್ಯದ ಮಾತೇ? ಅದು ಶ್ರೀಮನ್ನಾರಾಯಣನ ವಿವಾಹವಲ್ಲವೇ? ಆತನ ಪರಿವಾರವೇನು ಚಿಕ್ಕದೇ? ಆಗ ಸತ್ಯಲೋಕಾಧಿಪತಿ ಬ್ರಹ್ಮ ಹಾಗೂ ಕೈಲಾಸನಾಥರ ಸಲಹೆಯಂತೆ ಮಹಾ ಧನಿಕನಾದ ಕುಬೇರನಲ್ಲಿಯೇ ಸಾಲದ ಏರ್ಪಾಟನ್ನು ಮಾಡಿಕೊಂಡನು. ತಾನು ಪಡೆದ ಹಣಕ್ಕೆ ತನ್ನ ಭಕ್ತರು ಕೊಡುವ ಕಾಣಿಕೆಗಳಿಂದಲೇ ಆ ಸಾಲದ ಮರುಪಾವತಿ ಮಾಡುವುದಾಗಿ ಅಶ್ವತ್ಥ ವೃಕ್ಷರಾಜನನ್ನು ಸಾಕ್ಷಿದಾರನನ್ನಾಗಿ ಮಾಡಿಕೊಂಡು ಹಣವನ್ನು ಪಡೆದುಕೊಂಡನು.

ವೆಂಕಟಾಚಲಪತಿಯು ಮಾಡಿದ ಅಂದಿನ ಸಾಲವನ್ನು ಭಾರತೀಯರು

- ಹಾಗೂ ನಮ್ಮ ನಾಡಿನ ನಿವಾಸಿಗಳಾದ ಆತನ ಭಕ್ತರು ಇಂದಿಗೂ ಹೇಗೆ ತೀರಿಸುತ್ತ ಬಂದಿದ್ದಾರೆಂಬುದನ್ನು ತಿಳಿದುಕೊಳ್ಳುವುದು ಅತ್ಯಂತ ಮಹತ್ವದ ಹಾಗೂ ಭಾವನಾ ಪ್ರಧಾನವಾದ ವಿಷಯವೆನಿಸುವುದು.

ಕರ್ನಾಟಕ ರಾಜ್ಯದ ರಮಾರಮಣರೆಂದೆನಿಸಿಕೊಂಡಿದ್ದ ವಿಜಯನಗರ ಸಾಮ್ರಾಜ್ಯದ ಸಾಳ್ವನರಸಿಂಹದೇವ, ಅನಂತರ ಬಂದ ಕೃಷ್ಣದೇವರಾಯ. ಈ ಮಹಾನುಭಾವನಂತೂ ಏಳು ಸಲ ವೆಂಕಟಾಚಲಕ್ಕೆ ಭೇಟಿಯನ್ನಿತ್ತಿರುವಾಗ ಆತನಿಂದ ಹಾಗೂ ಆತನ ಕುಟುಂಬ ವರ್ಗದವರಿಂದ ಕೊಡಲ್ಪಟ್ಟ ಚಿನ್ನಾಭರಣಗಳು, ಗ್ರಾಮಗಳು ಇವುಗಳಿಗೆ ಲೆಕ್ಕವೇ ಇಲ್ಲ. ಅನಂತರದಲ್ಲಿ ಅಚ್ಯುತದೇವರಾಯ, ವೆಂಕಟಪತಿರಾಯ ಮೊದಲಾದವರು ಶ್ರೀ ಸ್ವಾಮಿಯ ಸೇವೆ ಗೈಯುವುದರಲ್ಲಿ ಹಿಂದೆ ಬಿದ್ದವರಲ್ಲ. ಇದೆಲ್ಲ ವಿಜಯನಗರ ಸಾಮ್ರಾಟರ ಕೊಡುಗೆ ಎಂದೆನಿಸಿಕೊಂಡಿತು.

**ಕನ್ನಡನಾಡಿನ ಸೇವೆ :**

ವಿಜಯನಗರದ ನಂತರ, ಕರ್ನಾಟಕದ ರಾಮದುರ್ಗ, ಜಮಖಿಂಡಿ, ನರಗುಂದ, ಚಿಂಚೋಳಿ, ಚಿಟಗುಪ್ಪ, ಸುರಪುರ ಹಾಗೂ ಮೈಸೂರು ಮೊದಲಾದ ಸಂಸ್ಥಾನಿಕರಿಂದಲೂ ಈ ದೇವನ ಸೇವೆಯು ಸ್ಮರಣೀಯ ರೀತಿಯಲ್ಲಿ ನಡೆಯಿತು. ಇಷ್ಟಾದರೂ ಯಾವ ರಾಜಾಧಿರಾಜರೂ ಸಹ ಬೆಟ್ಟವನ್ನು ಹತ್ತಿ ಸೇವೆ ಸಲ್ಲಿಸಿದವರಲ್ಲ. ರಾಣೀ ವಾಸದವರು ಮಾತ್ರ ತಪ್ಪದೇ ಬೆಟ್ಟ ಹತ್ತಿ ಸ್ವಾಮಿಯ ಸೇವೆಗೈದು ಮರಳುವುದೇ ಸಂಪ್ರದಾಯವಾಗಿತ್ತು. ಈ ಪದ್ಧತಿಯನ್ನು ಮೀರಿ ನಡೆದವರೆಂದರೆ ಮೈಸೂರಿನ ಶ್ರೀ ಜಯಚಾಮರಾಜ ಒಡೆಯರು ಮಾತ್ರ ಎಂಬುದು ಬಹುಮಹತ್ವದ ವಿಷಯವಾಗಿರುವುದು.

ಕನ್ನಡನಾಡಿನ ಅರಸರಲ್ಲಿ ಸುರಪುರ ಸಂಸ್ಥಾನಿಕರು ಬೆಟ್ಟದ ಮೇಲೆ ಮೊಟ್ಟಮೊದಲ ಬಾರಿ ಅನ್ನಛತ್ರವನ್ನು ಆರಂಭಿಸಿದರು. ದೇವನ ಪೂಜೆಗಾಗಿ ಹೂದ್ಕೋಟವನ್ನೂ ರಚಿಸಿದರು. ಏಕಾಂತ ಸೇವೆಯ ಕಾಲದಲ್ಲಿ ಮಲಗುವ

ಪಲ್ಲಂಗಕ್ಕೆ ನವಾರದ ಪಟ್ಟೆಗಳೊಂದಿಗೆ ಪ್ರತಿದಿನ ಬೆಳ್ಳಿಯ ತಂಬಿಗೆ ತುಂಬ ಹಾಲನ್ನು ಪೂರೈಸುವ ವ್ಯವಸ್ಥೆ ಮಾಡಿದರು.

**ಮೈಸೂರಿನ ಸೇವೆ :**

ಮೈಸೂರನ್ನಾಳಿದ ನಮ್ಮ ಪ್ರಭುಗಳಾದ ಕಂಠೀರವ ನರಸಿಂಹರಾಜರ ಕಾಲದಿಂಧ (ಕ್ರಿ.ಶ. 1667ರಿಂದ) ಶ್ರೀ ಸ್ವಾಮಿಯ ಸೇವೆಯು ಆರಂಭವಾಯಿತು. ಅವರು 410 ತೊಲೆಯ ಚಿನ್ನದ ಕೊಡೆಯನ್ನು ಅರ್ಪಿಸಿದರು. ಬೆಳ್ಳಿಯ ಗಜವಾಹನವನ್ನು, ಗಂಡಭೇರುಂಡಹಾರ, ಪಚ್ಚದಹಾರ, ರತ್ನದ ಹಾರ, ಲಕ್ಷ್ಮೀಹಾರ, ಸಾಲಿಗ್ರಾಮಗಳ ಹಾರ ಮೊದಲಾದ ಕಂಠಾಭರಣಗಳೊಂದಿಗೆ ದಂತದ ಪಲ್ಲಕ್ಕಿ, ಸರ್ವಭೂಪಾಲ ವಾಹನ, ಬೆಳ್ಳಿಯ ಚಾಮರಗಳು, ನಮ್ಮ ಕಾಡಿನಿಂದ ಹಿಡಿತರಿಸಿದ ಪಳಗಿದ ಆನೆಗಳು, ಸುಂದರವಾದ ಅಶ್ವಗಳು ಹಾಗೂ ಗೋವುಗಳನ್ನು ಸಮರ್ಪಿಸಿದರಲ್ಲದೆ ದೇವನ ಗರ್ಭಗುಡಿಯಲ್ಲಿ ಸದಾಕಾಲವೂ ಬೆಳಗಲು 1899 ತೊಲೆಯ ಬೆಳ್ಳಿಯ ನಂದಾದೀಪವನ್ನೂ ಸಹ ಸಮರ್ಪಿಸಿದರು. ಅಲ್ಲದೇ ಅದನ್ನು ನೋಡಿಕೊಳ್ಳಲು ಪರಿಚಾರಕರನ್ನೂ ನಿಯಮಿಸಿದರು.

**ನಿತ್ಯ ನವನೀತ ಸೇವೆ :**

ಪ್ರತಿದಿನವೂ ಬೆಳಗಿನ ಜಾವದಲ್ಲಿ ನಡೆಯುವ ಮೊದಲನೆಯ ಆರತಿಯು ನಮ್ಮ ರಾಜ್ಯದ ವತಿಯಿಂದ ಬೆಳಗುವಂತೆ ನೋಡಿಕೊಂಡರು. ಅಖಂಡ ನಂದಾದೀಪಕ್ಕೆ ಪ್ರತಿದಿನವೂ 5 ಕೆ.ಜಿ. ತುಪ್ಪವನ್ನು ಸಲ್ಲಿಸುವಂತೆ ಮಾಡಿದರು. ನೈವೇದ್ಯಕ್ಕಾಗಿ ಪ್ರತಿ ದಿನ ಪದಾರ್ಥಗಳನ್ನು ಪೂರೈಸುವಂತೆ ನೋಡಿಕೊಂಡರು. ಈ ಎಲ್ಲ ಕೆಲಸ ಕಾರ್ಯಗಳನ್ನು ನೋಡಿಕೊಂಡು ಹೋಗಲು ದೇವಗುಡಿಯ ಒಳ ಪ್ರಕಾರದಲ್ಲಿ ಒಂದು ಸ್ಥಳವನ್ನೂ ಸಹ ನಮ್ಮ ಅಧಿಕಾರಿಗಳ ವಶಕ್ಕೆ ಕೊಡುವಂತೆ ಮಾಡಿದ್ದರು. ಪ್ರತಿದಿನವೂ ಒಂದು ಬೆಳ್ಳಿಯ ತಟ್ಟೆಯಲ್ಲಿ ಕಲ್ಲುಸಕ್ಕರೆ ಬೆಣ್ಣೆ ವೀಳ್ಯದೆಲೆ, ಅಡಿಕೆ ಮೊದಲಾದವುಗಳ ಸಮರ್ಪಣೆಯಾಗುವಂತೆ ನೋಡಿಕೊಂಡರು. ಈ ಸೇವೆ "ನಿತ್ಯನವನೀತ

ಸೇವೆ'' ಎಂಬ ಹೆಸರಿನಿಂದ ಗುರುತಿಸುವಂತಾಯಿತು. ದೇವನ ದರ್ಶನಾರ್ಥಿಗಳಾಗಿ ಬಂದು ಹೋಗುವ ಯಾತ್ರಿಕರಿಗಾಗಿ ಭವ್ಯವಾದ ಮೊರು ಛತ್ರ (ಕರ್ನಾಟಕ ಛತ್ರ) ಎಂಬ ಹೆಸರಿನಿಂದ ಛತ್ರವನ್ನು ಕಟ್ಟಿಸಿ ಅಲ್ಲಿ ಅನ್ನದಾನಗಳು ನಡೆಯುವಂತೆ ನೋಡಿಕೊಂಡರು.

**ತೋಟೋತ್ಸವ :**

ಪ್ರತಿದಿನವೂ ಶ್ರೀನಿವಾಸನನ್ನು ಸಭಾಮಂಟಪಕ್ಕೆ ಕರೆತಂದು ಆತನನ್ನು ಬೆಳ್ಳಿಯ ಸಿಂಹಾಸನದಲ್ಲಿ ವಿರಾಜಮಾನನಾಗುವಂತೆ ಮಾಡಿದಾಗ ಅಂದಿನ ಆದಾಯ ಹಾಗೂ ಖರ್ಚು ಇವುಗಳ ವರದಿಯನ್ನೊಪ್ಪಿಸುವಾಗ ಮೈಸೂರಿನ ಸಂಸ್ಥಾನದ ವತಿಯಿಂದ ಓರ್ವ ಪ್ರತಿನಿಧಿಯು ಅಲ್ಲಿ ಉಪಸ್ಥಿತನಿರಬೇಕೆಂಬ ನಿಯಮವನ್ನೂ ಜಾರಿಗೆ ತಂದರು. ಕನ್ನಡಿಗರ ಈ ಔದಾರ್ಯವನ್ನು ಕಂಡು ಮೆಚ್ಚಿದ ವೆಂಕಟಾಚಲ ಪತಿಯು ತನ್ನ ಪತ್ನಿಯರಿಂದೊಡಗೂಡಿಕೊಂಡು ತೋಟೋತ್ಸವ ನಿಮಿತ್ತವಾಗಿ ನಮ್ಮ ಕರ್ನಾಟಕ ಛತ್ರಕ್ಕೆ ಬಂದು ಹೋಗುವ ಕಾರ್ಯವು ಆರಂಭಗೊಂಡಿತು. ಈ ಉತ್ಸವವು ಇಂದಿಗೂ ನಡೆದುಕೊಂಡು ಬರುತ್ತಿರುವುದು ಕನ್ನಡಿಗರೆಲ್ಲರೂ ಹೆಮ್ಮೆಪಡುವಂಥ ವಿಷಯವಾಗಿರುವುದು. ನಮ್ಮ ನಾಡಿನಲ್ಲಿ ನೂರಕ್ಕೆ ಮೂವತ್ತರಷ್ಟು ಜನರು ಈ ದೇವನ ಭಕ್ತರಾಗಿರುವರು. ಅವರೆಲ್ಲರೂ ತಮ್ಮ ಈ ದೇವನನ್ನು ಕುಲಸ್ವಾಮಿ ಎಂದು ನಂಬಿ ಆತನ ಅನುಗ್ರಹಕ್ಕಾಗಿ ಒಂದು ಸಲವಾದರೂ ತಿರುಪತಿಗೆ ಬಂದುಹೋಗುವ ಸಂಪ್ರದಾಯವನ್ನು ನಡೆಸಿಕೊಂಡು ಬಂದಿರುವರು. ಕನ್ನಡದ ಹರಿದಾಸರಂತೂ ಈ ದೇವನ ಹೆಸರಿನಲ್ಲಿ ಸಾವಿರಾರು ಕೀರ್ತನೆಗಳನ್ನು ರಚಿಸಿದರಲ್ಲದೆ, ಆತನು ಬ್ರಹ್ಮರಥಾರೂಢನಾದಾಗ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ತಾಳ ತಂಬೂರಿಗಳೊಂದಿಗೆ ಭಕ್ತಿಪರವಶರಾಗಿ ಹಾಡಿ ನರ್ತಿಸುವ ಸೊಬಗನ್ನು ಕಾಣಬೇಕಾದರೆ ಒಂದು ಸಲವಾದರೂ ಬ್ರಹ್ಮೋತ್ಸವದ ಕಾಲದಲ್ಲಿ ಪಾಲ್ಗೊಳ್ಳಲು ತಿರುಮಲೆಗೆ ಹೋಗಲೇಬೇಕೆಂದು ಆಗ್ರಹದಿಂದ ಹೇಳಲು ಸಂತೋಷವೆನಿಸುವುದು.

# ಸಪ್ತವ್ಯಾಧರು ಯಾರು?

ಮಾನವ ಶರೀರವು ಲಭ್ಯವಾಗಬೇಕಾದಲ್ಲಿ ನಾವು ಮಾಡಿದ ಪೂರ್ವಜನ್ಮದ ಸುಕೃತ ಹಾಗೂ ಭಗವದನುಗ್ರಹ ಎರಡೂ ಬಹು ಅಗತ್ಯ. ಸಕಲ ಜೀವಿಗಳಲ್ಲಿ ಮಾನವ ಜನ್ಮ ಬಹುದೊಡ್ಡದು. ಅತ್ಯಂತ ಮೌಲಿಕವಾದುದು.* ಅದನ್ನು ಹಾನಿ ಮಾಡಿಕೊಳ್ಳಬೇಡಿ ಎಂದು ಪ್ರಾಚೀನರು ಓತನುಡಿಗಳಿಂದ ತಿಳಿಸಿದ್ದಾರೆ. ನಮಗೆ ಈ ಮಾನವ ದೇಹವನ್ನಿತ್ತ ಮಾತಾ ಪಿತೃಗಳು ಹಾಗೂ ಅದೇ ವಂಶದ ವಂಶವಾಹಿನಿಯಲ್ಲಿ ಬರುವ ಹಿರಿಯರನ್ನು ನಾವು ಶ್ರದ್ಧೆ, ಭಕ್ತಿ, ವಿಶ್ವಾಸಗಳಿಂದ ಸ್ಮರಿಸಿಕೊಳ್ಳುವ ವಿಧಾನವನ್ನೇ ''ಶ್ರಾದ್ಧ'' ಎಂಬ ಹೆಸರಿನಿಂದ ಕರೆಯುತ್ತ ಬಂದಿದ್ದೇವೆ. ಪರ್ವಕಾಲಗಳಲ್ಲಿ ಅಂದರೆ ಸೂರ್ಯಗ್ರಹಣ, ಚಂದ್ರಗ್ರಹಣ, ಉತ್ತರಾಯಣ, ದಕ್ಷಿಣಾಯನ, ಮಹಾಲಯ, ಷಣ್ಣವತಿ (ಅಂದರೆ ತೊಂಬತ್ತಾರು ಪರ್ವ ಕಾಲಗಳು) ಇವೇ ಮೊದಲಾದ ಸಂದರ್ಭಗಳಲ್ಲಿ ಮಾತಾಪಿತೃಗಳೊಂದಿಗೆ ವಂಶವಾಹಿನಿಯ ಹಿರಿಯರನ್ನೂ ಸಹ ಕ್ರಮವಾಗಿ ಸ್ಮರಿಸಿಕೊಂಡು ಆ ಹಿರಿಯರ ಹೆಸರಿನಲ್ಲಿ ಅನ್ನೋದಕಾದಿಗಳನ್ನು ಕೊಡುವ ಸಂಪ್ರದಾಯವು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ.

ಈ ಶ್ರಾದ್ಧಕರ್ಮವನ್ನು ಮಾಡುವ ಕಾಲವನ್ನೂ ಸಹ ನಮ್ಮ ಹಿರಿಯರು ಸೂಚಿಸಿದ್ದಾರೆ. ಪುರಾಣಗಳಲ್ಲಿ ''ಕುತಪ'' ಎಂದು ಆ ಕಾಲವನ್ನು ಸಂಭೋದಿಸಲಾಗಿದೆ. ಕು ಎಂದರೆ ಭೂಮಿ ಎಂದೂ, ತಪ ಎಂದರೆ ಕಾದಿರುವಿಕೆ ಎಂದೂ ಅಪರಾಹ್ನ ಅಂದರೆ ಒಂದರಿಂದ ಎರಡು ಗಂಟೆಯ ಸಮಯವು ಯೋಗ್ಯ ಎಂಬ ಮಾತನ್ನು ಮಹಾಭಾರತದ ಅರಣ್ಯಕದಲ್ಲಿ ಕಾಣಬಹುದಾಗಿದೆ. ಇನ್ನು ಈ ಕಾರ್ಯದಲ್ಲಿ ನಿರತರಾದಾಗ

ಪುರೋಹಿತರಿಂದ ಹೇಳಲ್ಪಡುವ ಒಂದು ಮಹತ್ವದ ಮಂತ್ರವನ್ನು ಕುರಿತು ವಿಚಾರ ಮಾಡೋಣ.

*ಸಪ್ತ ವ್ಯಾಧಾ ದಶಾರಣ್ಯೇಷು*
*ಮೃಗಾಃ ಕಾಲಂ ಜರೇಗಿರೌ।*
*ಚಕ್ರವಾಕಾಃ ಶರದ್ವೀಪೇ*
*ಹಂಸಾ : ಸರಸಿ ಮಾನಸೇ ॥*

ಎಂಬ ಈ ಮಂತ್ರವನ್ನು ಕೊನೆಯ ಭಾಗದಲ್ಲಿ ಹೇಳುತ್ತಾರೆ. ಚಿಕಿತ್ಸಕ ಬುದ್ಧಿಯವನಾದ ಶ್ರದ್ಧಾಳು ಈ ಸಪ್ತವ್ಯಾಧರು ಚಕ್ರವಾಕ ಹಾಗೂ ಹಂಸ ಪಕ್ಷಿಗಳ ವಿಚಾರವೇನು? ಎಂದು ಪ್ರಶ್ನೆ ಮಾಡಿದಾಗ ಅನೇಕ ಜನರಿಂದ ಸರಿಯಾದ ಉತ್ತರವೇ ದೊರೆಯುವುದಿಲ್ಲ. ಹಾಗೆಂದ ಮಾತ್ರಕ್ಕೆ ಈ ಮಂತ್ರಗಳಲ್ಲಿ ಸತ್ವ ಹಾಗೂ ತತ್ವಗಳು ಅಡಕವಾಗಿಲ್ಲ ಎಂದು ಭಾವಿಸಕೂಡದು. ಇಂಥ ವಿಚಾರಗಳಿಗೆಲ್ಲ ಗ್ರಂಥಾವಲೋಕನವು ಬಹು ಅಗತ್ಯ.

ಪಿತೃವರ್ತಿ ಎಂಬಾತನು ಕುರುಕ್ಷೇತ್ರದಲ್ಲಿ ವಾಸಿಸುತ್ತಿದ್ದ. ಈತನು ಕೌಶಿಕ ಎಂಬ ಮುನಿಯ ಕಿರಿಯ ಮಗ. ಈತನಿಗೆ ಸ್ವಸೃಪ, ಕ್ರೋಧನ, ಹಿಂಸಾ, ಪಿಶುನ, ಕವಿ ಹಾಗೂ ವಾಗ್ದುಷ್ಟ ಎಂಬ ಹೆಸರಿನ ಆರು ಜನ ಸೋದರರಿದ್ದರು. ಇವರೆಲ್ಲರೂ ಗರ್ಗ ಮುನಿವರ್ಯರ ಆಶ್ರಮದಲ್ಲಿದ್ದುಕೊಂಡು ವೇದಾಭ್ಯಾಸದಲ್ಲಿ ನಿರತರಾಗಿದ್ದರು. ಒಂದು ವರುಷ ದೇಶದಲ್ಲಿ ಸಹಿಸಲಸಾಧ್ಯವಾಗದ ಬರಗಾಲವು ಬಿದ್ದಿತು. ಇವರೆಲ್ಲರಿಗೂ ಪಿತೃಕಾರ್ಯ ಮಾಡುವ ಚಿಂತೆ ಕಾಡತೊಡಗಿತು. ಎಲ್ಲರೂ ಮಿಳಿತರಾಗಿ ಆಶ್ರಮದಲ್ಲಿದ್ದ ಹಸುವನ್ನೇ ವಧೆ ಮಾಡಿದರು. ಗುರುಗಳಿಗೆ ಅಡವಿಗೆ ಹೋದ ಗೋಮಾತೆ ಹುಲಿಯ ಬಾಯಿಗೆ ಬಲಿಯಾಯಿತೆಂದು ಸುಳ್ಳ ಹೇಳಿದರು.

ಪಿತೃವರ್ತಿಯು ತಂದೆಯ ಶ್ರಾದ್ಧ ನಿಮಿತ್ತವಾಗಿ ತನ್ನ ಸೋದರರನ್ನೇ ವಿಶ್ವೇ ದೇವಸ್ಥಾನದಲ್ಲಿ ಇನ್ನೊಬ್ಬನನ್ನು ಪಿತೃಸ್ಥಾನದಲ್ಲಿ, ಮತ್ತೊಬ್ಬನನ್ನು

ಅತಿಥಿ ಸ್ಥಾನದಲ್ಲಿ ಕೂಡಿಸಿ ಗೋಮಾಂಸವನ್ನೇ ಅವರಿಗೆ ಬಡಿಸಿದನು. ಈ ನಿಮಿತ್ತವಾಗಿ, ಗುರುಗಳಿಗೆ ಸುಳ್ಳು ಹೇಳಿದ ಪಾಪ, ಬಂಧುಗಳನ್ನೇ ಪಿತೃಸ್ಥಾನದಲ್ಲಿ ಕೂಡಿಸಿದ ಅಪಚಾರ, ಗೋವಧೆ ಮಾಡಿದ ಅಪರಾಧಗಳಿಂದಾಗಿ ಇವರೆಲ್ಲರೂ ಜನ್ಮಾಂತರದಲ್ಲಿ ಜಿಂಕೆಗಳಾಗಿ, ಚಕ್ರವಾಕ ಪಕ್ಷಿಗಳಾಗಿ, ಹಂಸ ಪಕ್ಷಿಗಳಾಗಿ ಜನ್ಮ ತಾಳಿದರು. ಸುದೈವದಿಂದ ಈ ಯೋನಿಯಲ್ಲಿ ಜನಿಸಿದಾಗಲೂ ಸಹ ಅವರಿಗೆ ಪೂರ್ವಜನ್ಮದಲ್ಲಿ ಮಾಡಿದ ಅಪರಾಧದ ಸ್ಮರಣೆಯು ಬರುತ್ತಿತ್ತು. ಪ್ರಾಯಃಶ್ಚಿತ್ತ ಮನೋಭಾವದಿಂದ ತಮ್ಮ ಅಪರಾಧಗಳನ್ನು ಸ್ಮರಿಸಿ ಉದ್ಧರಿಸುವಂತೆ ದಿನವೂ ದೇವನಲ್ಲಿ ಪ್ರಾರ್ಥಿಸತೊಡಗಿದರು. ಕಾಲಾಂತರದಲ್ಲಿ ಪಶ್ಚಾತ್ತಾಪದಗ್ಧರಾದ ಇವರಲ್ಲಿ ಪಿತೃವರ್ತಿಯು ಬ್ರಹ್ಮದತ್ತನೆಂಬ ರಾಜನಾಗಿ ಹುಟ್ಟಿದ. ಆಗ ಆತನಿಂದ ವಧಿಸಲ್ಪಟ್ಟ ಗೋವು ದೇವಲ ಋಷಿಯ ಮಗಳಾಗಿ ಸನ್ಮತಿ ಎಂಬ ಹೆಸರಿನಿಂದ ಕರೆಸಿಕೊಂಡಳು. ಬ್ರಹ್ಮದತ್ತನೊಂದಿಗೆ ಈಕೆಯ ಪಾಣಿಗ್ರಹಣವಾಯಿತು. ಪೂರ್ವಜನ್ಮದ ಸೋದರರೆಲ್ಲ ಈತನ ರಾಜ್ಯದಲ್ಲಿ ಮಂತ್ರಿಗಳಾಗಿ ಪ್ರಜಾವತ್ಸಲರಾಗಿ ರಾಜ್ಯಭಾರ ಮಾಡುತ್ತ ಕಾಲಾಂತರದಲ್ಲಿ ಅಗಾಧವಾದ ತಪಸ್ಸನ್ನಾಚರಿಸಿ ಎಲ್ಲರೂ ಸದ್ಗತಿಯನ್ನು ಪಡೆದರೆಂಬ ವಿಷಯವನ್ನು ನಾವು ಮತ್ಸ್ಯಪುರಾಣ, ಶಿವಪುರಾಣಗಳಿಂದ ತಿಳಿಯಬಹುದು. ಈ ಸಂದರ್ಭದಲ್ಲಿ ನೈಮಿಷಾರಣ್ಯ, ಕುರುಕ್ಷೇತ್ರ, ಮಾನಸ ಸರೋವರ ಮೊದಲಾದವುಗಳ ಸ್ಮರಣೆಯು ಕ್ಷೇಮಕಾರಕ. ಲೇಖಕನು ಪುರಾಣಗಳಲ್ಲಿ ಕಂಡ ವಿಷಯವನ್ನೇ ಇಲ್ಲಿ ವಿವರವಾಗಿ ಮಂಡಿಸಿರುವದುಂಟು. ಇದರಲ್ಲಿ ಲೋಪದೋಷಗಳೇನಾದರೂ ಇದ್ದಲ್ಲಿ ಅಥವಾ ಇದಕ್ಕೂ ಹೆಚ್ಚಿನ ಸಮಾಧಾನಕಾರಕವಾದ ಸಂದರ್ಭಗಳಿದ್ದಲ್ಲಿ, ಅದನ್ನು ತಿಳಿಸಿಕೊಟ್ಟಲ್ಲಿ ಮಹದುಪಕಾರ ಮಾಡಿದಂತಾಗುವುದು.

# ಗರ್ವಹರಣಮಾಡಲು ಭಗವಂತನ ಆಟ

ರಾಮಕೃಷ್ಣಾದ್ಯವತಾರಗಳಲ್ಲಿ ಬೇಧವೆಂಬುದಿಲ್ಲ. ಅದೇ ರೀತಿಯಲ್ಲಿ ವೃಷಭಾನುಪುತ್ರಿಯಾದ ರಾಧಾ ಹಾಗೂ ಜನಕಪುತ್ರಿ ಜಾನಕಿ ಇವರಲ್ಲಿಯೂ ಭೇದವೆಂಬುದಿಲ್ಲ. ಪವನ ನಂದನನ ಈ ಅಚ್ಛೇದ್ಯ ತತ್ತ್ವವನ್ನು ಧನುರ್ಧಾರಿ ಶ್ರೀರಾಮಚಂದ್ರನು ಮಾತ್ರ ಬಲ್ಲವನಾಗಿರುವನು. ಪವನ ನಂದನನು ಶ್ರೀರಾಮ ಹಾಗೂ ಸೀತಾಮಾತೆಯರಲ್ಲಿ ಬಹು ಭಕ್ತಿಯನ್ನುಳ್ಳವನು. ಭಕ್ತ ಹಾಗೂ ಭಗವಂತರಲ್ಲಿ ನಡೆದ ಘಟನೆಗಳೆಲ್ಲ ಲೀಲಾ ವಿನೋದಗಳಿಂದ ಕೂಡಿದವುಗಳಾಗಿರುವವು. ಅಭ್ಯಾಸಿಗರಿಗೆ ಅಮರತ್ವವನ್ನೀಯುವ ಮಹಾ ಘಟನೆಗಳೆನಿಸುವವು.

ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ ದ್ವಾಪರದಲ್ಲಿ ಭಗವಾನ್ ಶ್ರೀಕೃಷ್ಣನು ದ್ವಾರಕಾಧೀಶನಾಗಿ ಅವತರಿಸಿದನು. ಆತನ ಈ ಅವತಾರ ಕಾರ್ಯದಲ್ಲಿ ತನ್ನ ಭಕ್ತರ ಗರ್ವಹರಣ ಮಾಡಿದ ಬಗೆಯು ಮಾತ್ರ ಬಹು ಚಿತ್ತಾಕರ್ಷಕ ಕಥೆಯಾಯಿತು.

ಶ್ರೀಕೃಷ್ಣನ ಪ್ರಾಣಪ್ರಿಯೆ ಪತ್ನಿ ಸತ್ಯಭಾಮಾ ದೇವಿಯ ಸಂತೋಷಕ್ಕಾಗಿ ಪಾರಿಜಾತ ವೃಕ್ಷವನ್ನು ತಂದು ಅವಳ ಮನೆಯಂಗಳದಲ್ಲಿಡಲಾಯಿತು. ಇದರಿಂದಾಗಿ ಅವಳಲ್ಲಿ ಅಹಂಕಾರವು ಇನ್ನಷ್ಟು ಹೆಚ್ಚಿತು. ದ್ವಾರಕಾನಾಥನ ಪ್ರೀತಿಯು ನನ್ನ ಮೇಲಿದೆ ಎಂಬ ದುರಭಿಮಾನವು ಹೆಡೆಯಾಡತೊಡಗಿತು. ಒಂದು ದಿನ ಅವಳು ಏಕಾಂತದಲ್ಲಿ ಶ್ರೀ ಕೃಷ್ಣನಿಗೆ ಜನಕಪುತ್ರಿಯು ನನಗಿಂತ ಸುಂದರಳಾಗಿದ್ದಳೆ? ಎಂದು ಪ್ರಶ್ನೆ ಮಾಡಿದಳಲ್ಲದೆ, ಆಕೆಯ ಸೌಂದರ್ಯಕ್ಕೆ ಮಾರು ಹೋದ ಶ್ರೀರಾಮ ಅವಳೊಂದಿಗೆ ಗೋಂಡಾರಣ್ಯವನ್ನೆಲ್ಲ

ಸುತ್ತಿದನಲ್ಲವೆ? ಎಂದು ಕೊಂಕು ನುಡಿದಳು. ಗಿರಿಧಾರಿಗೆ ಅವಳ ಅಂತರಂಗದ ಅರಿವಾಗಿ ಆತನು ಮುಗುಳುನಗೆ ತೋರಿದ.

ಇದೇ ರೀತಿಯಲ್ಲಿ ಆತನ ಸುದರ್ಶನ ಚಕ್ರವು ಮಹಾಮುನಿಗಳಾದ ದೂರ್ವಾಸರು ನನ್ನಿಂದಾಗಿ ತ್ರಿಲೋಕದಲ್ಲಿ ಗಾಬರಿಗೊಂಡು ಸಂಚರಿಸಿದರೆಂಬ ಹೆಮ್ಮೆ ಕಾಣಿಸಿಕೊಂಡಿತು. ತಾನು ಹೊರಬಿದ್ದರೆ ಸಾಕು, ತ್ರಿಲೋಕವೆಲ್ಲ ನಡುಗಿ ಹೋಗುವದೆಂಬ ಅಹಂಕಾರವು ಸೋರತೊಡಗಿತು. ಶ್ರೀ ಕೃಷ್ಣನ ಅಚ್ಚುಮೆಚ್ಚಿನ ಅಸ್ತ್ರ ತಾನು ಎಂಬ ಭಾವನೆ ಇದಕ್ಕೆಲ್ಲ ಮೂಲ ಕಾರಣವೆನಿಸಿತು. ತಾನು ಮಹಾ ಬಲಶಾಲಿ ಎಂಬ ಭಾವನೆ ಸುದರ್ಶನದಲ್ಲಿ ಮೂಡಿತು.

ಸತ್ಯಭಾಮಾ ಹಾಗೂ ಸುದರ್ಶನ ಚಕ್ರದಂತೆ ಭಗವಂತನ ಅಚ್ಚುಮೆಚ್ಚಿನ ವಾಹನವಾದ ಗರುಡನಲ್ಲಿಯೂ ಸಹ ತನ್ನಷ್ಟು ವೇಗವಾಗಿ ಸಂಚರಿಸುವರಾರಿದ್ದಾರೆ, ವಜ್ರಾಯುಧವೂ ಸಹ ನನಗೇನೂ ಮಾಡದು. ದೇವದಾನವರ ಯುದ್ಧಕಾಲದಲ್ಲಿ ನಾನು ನನ್ನ ರೆಕ್ಕೆಗಳಿಂದ, ಮೂಗಿನ ಹಿಡಿತದಿಂದ, ಪಂಜರಗಳ ಬಲದಿಂದ ಹೋರಾಡುತ್ತ ಅತುಲ ಪರಾಕ್ರಮ ತೋರಿಸಿದವನಲ್ಲವೆ. ನನ್ನ ಹೋರಾಟದಿಂದಾಗಿ ನನ್ನ ಸ್ವಾಮಿ ಶ್ರೀ ವಿಷ್ಣು ಸಂತೋಷಪಟ್ಟನಲ್ಲವೇ. ಅಂದ ಮೇಲೆ ನನಗೆ ಸಮನಾದವರಿದ್ದಾರೆಯೇ ಎಂಬ ಗರ್ವವು ಕಾಣಿಸಿಕೊಂಡಿತು.

ಈ ಮೂವರೂ ಭಗವಂತನ ಭಕ್ತಾಗ್ರೇಸರರೆನಿಸಿಕೊಳ್ಳುವವರು. ಇವರ ಗರ್ವಹರಣ ಮಾಡುವದೇ ವಿಹಿತವೆಂದು ಭಾವಿಸಿದ ಶ್ರೀಮನ್ನಾರಾಯಣನು ಅಂತರಂಗದಲ್ಲಿ ಆಂಜನೇಯನನ್ನು ಸ್ಮರಿಸಿದನು. ಆತನು ದ್ವಾರಕಾನಗರದ ರಾಜೋದ್ಯಾನದಲ್ಲಿ ಕಾಣಿಸಿಕೊಂಡನು. ಅಲ್ಲಿ ಬಿಡಲಾಗಿದ್ದ ಹಣ್ಣುಗಳೆಲ್ಲವನ್ನೂ ತನಗೆ ಬೇಕಾದಷ್ಟು ತಿಂದು ಬೇಡವಾದವುಗಳನ್ನೆಲ್ಲ ಬಿಸಾಡತೊಡಗಿದನು. ಆತನನ್ನು ಹತೋಟಿಗೆ ತರುವದು ಕಾವಲುಗಾರರಿಂದ ಅಸಾಧ್ಯವೆನಿಸತೊಡಗಿತು. ಹನುಮಂತನ ಹಾವಳಿಯು ಅರಮನೆಯನ್ನು

ತಲುಪಿತು. ಆಗ ದ್ವಾರಕಾಧೀಶನು ಗರುಡನನ್ನು ಬರಮಾಡಿಕೊಂಡು ಚತುರಂಗ ಸೇನೆಯೊಂದಿಗೆ ಹೋಗಿ ಆ ಕೋತಿಯನ್ನು ಹೆಡಮುರಿಗೆ ಕಟ್ಟಿ ಹಿಡಿದು ತರುವಂತೆ ಅಪ್ಪಣೆ ಮಾಡಿದನು. ಗರುಡನು ಒಂದು ಕೋತಿಯನ್ನು ಹಿಡಿದು ತರಲು ಚತುರಂಗ ಸೇನೆಯು ಬೇಕೆ? ನಾನಿಲ್ಲವೆ ಕ್ಷಣಾರ್ಧದಲ್ಲಿ ಆ ಕೋತಿಯನ್ನು ತಂದು ತಮ್ಮ ಪಾದಕ್ಕೊಪ್ಪಿಸುವೆ ಎಂದು ಅಹಂಕಾರದಿಂದ ಉದ್ಯಾನವನದತ್ತ ಹೊರಟನು. ಆಂಜನೇಯನ ನೇತ್ರಗಳನ್ನು ಕಂಡು ಸೇವಕರು ಭಯಭೀತರಾಗಿ ನಡುಗುತ್ತ ನಿಂತಿದ್ದರು. ಅವರ ಪರಿಸ್ಥಿತಿಯನ್ನು ಕಂಡು ಗರುಡನು ನಗತೊಡಗಿದನು. ದ್ವಾರಕಾನಗರದ ಉದ್ಯಾನವನವೆಲ್ಲ ಬಿರುಗಾಳಿಗೆ ಸಿಕ್ಕು ತತ್ತರಿಸಿಹೋದಂತಾಗಿತ್ತು.

ವೈನತೇಯನಿಗೆ ಆ ಕೋತಿಯ ಕಿಡಿಗೇಡಿತನವನ್ನು ಕಂಡು ಸಿಟ್ಟು ನೆತ್ತಿಗೇರಿತು. "ಎಲವೋ ದುಷ್ಟ ಜಂತುವೆ, ನೀನಾರು? ಈ ಸುಂದರ ವನವನ್ನು ಹಾಳು ಮಾಡಿದ ನಿನ್ನನ್ನು ಸುಮ್ಮನೆ ಬಿಡಲಾಗುವುದೇ? ಎಂದು ಅಬ್ಬರಿಸತೊಡಗಿದನು. ಆಗ ಆಂಜನೇಯನು "ನಾನು ವಾನರ ಎಂಬುದನ್ನು ನೀನು ಬಲ್ಲೆ. ಅಂದ ಮೇಲೆ ನನ್ನ ಸ್ವಭಾವದಂತೆ ನಾನು ನಡೆದುಕೊಂಡಿರುವೆ. ಅದಕ್ಕೇಕೆ ಇಷ್ಟೊಂದು ಕೋಪಿಸಿಕೊಂಡಿರುವೆ" ಎಂದನು. ವೈನತೇಯನು "ಓಹೋ ನಿನಗೆ ಇಷ್ಟೊಂದು ಸೊಕ್ಕಿದೆಯೇ? ನಿನ್ನನ್ನು ಹೆಡಮುರಿಗೆ ಕಟ್ಟಿ ತರುವಂತೆ ನಮ್ಮ ಪ್ರಭುಗಳು ಅಪ್ಪಣೆ ಮಾಡಿದ್ದಾರೆ" ಎಂದನು. ಅದಕ್ಕೆ ಅಂಜನೇಯನು "ಯಾವ ಪ್ರಭು? ಯಾರ ಪ್ರಭು? ನನ್ನ ಪ್ರಭು ಶ್ರೀರಾಮಚಂದ್ರ. ಆತನ ವಿನಃ ನಾನು ಯಾರನ್ನೂ ಪ್ರಭು ಎಂದು ಮನ್ನಿಸಲಾರೆ, ಹೊರಟು ಹೋಗು" ಎಂದನು.

ಹನುಮಂತನ ಮಾತಿನಿಂದ ವೈನತೇಯನ ಸಿಟ್ಟು ನೆತ್ತಿಗೇರಿತು. ಆತನು ಎತ್ತರಿಸಿದ ಧ್ವನಿಯಿಂದ "ಎಲವೋ, ನೀನು ಹೇಳಿ ಕೇಳಿ ಕೋತಿ. ನಿನ್ನ ಹುಟ್ಟುಗುಣವನ್ನು ಬಿಡುವವನಲ್ಲ, ನಾನಾರು ಎಂಬುದನ್ನು ಬಲ್ಲೆಯಾ?"

"ಹೋಗಯ್ಯಾ, ನಿನ್ನಂಥ ಲಕ್ಷಾಂತರ ಹಕ್ಕಿಗಳನ್ನು ನಾನು ಕಂಡಿದ್ದೇನೆ. ನಿನ್ನಲ್ಲಿ ಶಕ್ತಿ ಇದ್ದರೆ ಮುಂದೆ ಬಾ".

ಹನುಮಂತನಿಂದ ಬಂದ ಆಹ್ವಾನದ ಮಾತು ಗರುಡನ ಅಹಂಕಾರಕ್ಕೆ ನಾಟಿತು. ಅದ್ದಕ್ಕಿದ್ದಂತೆ ಆತನು ಆಂಜನೇಯನ ಮೇಲೆ ಹಾರಿದ. ಮೊದಲೇ ಇದನ್ನು ಗುರುತಿಸಿದ ಹನುಮಂತನು, ಆತನ ಆಕ್ರಮಣವನ್ನು ಸಹಜ ರೀತಿಯಲ್ಲಿ ಸ್ವೀಕರಿಸಿ ಮಕ್ಕಳ ಕೈಯಲ್ಲಿ ಸಿಕ್ಕ ಗೊಂಬೆಯಂತೆ ಆತನನ್ನು ತನ್ನ ಬಾಲದಿಂದ ಗಿರಗಿರನೆ ತಿರುಗಿಸಿ ದೂರ ಬಿಸಾಡುವ ಮುನ್ನ ಹೇಳಿದ. "ನಾನು ಕೋಸಲಾಧಿಪತಿ ಶ್ರೀರಾಮಚಂದ್ರ ಪ್ರಭುವಿನ ಸೇವಕ, ತಿಳಿಯಿತೇ?"

ಈ ವಾನರನು ತನ್ನ ಬಾಲದಿಂದ ಬಿಗಿಯಾಗಿ ಹಿಡಿದುಕೊಳ್ಳದಿದ್ದಲ್ಲಿ ಈತನಿಗೆ ಸರಿಯಾದ ಬುದ್ಧಿ ಕಲಿಸಬಹುದಾಗಿತ್ತು ಎಂದು ಯೋಚಿಸಿ "ಅಯ್ಯಾ ನಿನ್ನ ಮಾತೇನೋ ಸರಿಯಾಗಿದೆ. ಆದರೆ ನನ್ನ ಪ್ರಭು ನಿನ್ನನ್ನು ಹಿಡಿದು ತರಲು ಆಜ್ಞೆ ಮಾಡಿದ್ದಾರೆ. ಆದ್ದರಿಂದ ನೀನು ಬರಲೇಬೇಕು".

ವೈನತೇಯ, ವೃಥಾ ಕಾಲಹರಣ ಮಾಡಬೇಡ. ನನ್ನಿಂದ ದೂರ ಹೋಗು. ಇಲ್ಲಿಯ ರಸಭರಿತವಾದ ಫಲಗಳನ್ನು ತಿನ್ನಲು ನನಗೆ ಅವಕಾಶ ಕೊಡು." ಎಂದು ಒಂದು ಸಲ ಆತನನ್ನು ಚನ್ನಾಗಿ ಸುತ್ತಾಡಿಸಿ ಆತನು ದೂರ ಹೋಗಿ ಬೀಳುವಂತೆ ಮಾಡಿದ. ಗರುಡನು ಸಮುದ್ರದ ದಂಡೆಗೆ ಬಂದು ಬಿದ್ದುಕೊಂಡ. ಸ್ವಲ್ಪ ಹೊತ್ತಿನ ಮೇಲೆ ಆತನಿಗೆ ಎಚ್ಚರವಾಯಿತು. ಲಗುಬಗೆಯಿಂದ ಹಾರಿ ಬರದು ಶ್ರೀಕೃಷ್ಣನ ಪದತಲದಲ್ಲಿ ತನ್ನ ಶಿರವನ್ನಿಟ್ಟ. ಅದನ್ನು ಕಂಡ ಶ್ರೀ ಕೃಷ್ಣನು ಮುಗುಳುನಗೆಯಿಂದ ಆತನ ಕಡೆಗೆ ನೋಡಿದಾಗ,

"ಪ್ರಭು, ಆ ಕಪಿಯು ಸಾಮಾನ್ಯವಾದುದಲ್ಲ. ಮಹಾ ಕೊಬ್ಬಿದ ಕೋತಿ" ಎಂದು ಹೇಳಿದುದನ್ನು ಕಂಡ ಶ್ರೀಕೃಷ್ಣನು, ಇನ್ನೂ ಈತನ ಅಹಂಕಾರವು ಅಡಗಿಲ್ಲ ಎಂದು ತಿಳಿದು ಪುನಃ ಗರುಡನಿಗೆ ಹೇಳಿದ.

"ವೈನತೇಯ, ಆ ವಾನರನು ಈಗ ಮಲಯ ಗಿರಿಯಲ್ಲಿದ್ದಾನೆ. ನೀನು ಅಲ್ಲಿಗೆ ಹೋಗಿ ನಿನ್ನ ಪ್ರಭು ಶ್ರೀರಾಮಚಂದ್ರನು ನೀನು ಒಂದು ಸಲ ದ್ವಾರಕೆಗೆ ಬಂದು ಹೋಗಬೇಕೆಂದು ತಿಳಿಸಿದ್ದಾನೆ ಎಂದು ಹೇಳು. ಈಗಲಾದರೂ ಬರುವೆಯಾ ಎಂದು ಕೇಳು" ಎಂದು ಹೇಳಿ ಕಳುಹಿಸಿದನು. ಅದರಂತೆ

ಗರುಡನು ಹೋಗಿ ಹೇಳಲು "ಆಗಲಿ, ನೀನು ಹೊರಡು, ಆನಂತರದಲ್ಲಿ ನಾನು ಬರುವೆ" ಎಂದು ಆಂಜನೇಯನು ಹೇಳಿದಾಗ ಈ ಕೋತಿ ನನ್ನಷ್ಟು ವೇಗದಲ್ಲಿ ಬಂದು ದ್ವಾರಕಾಧೀಶನನ್ನು ಕಾಣಬಹುದೇ? ಎಂದು ಯೋಚಿಸುತ್ತ ಆತನು ಹೊರಟು ಹೋದನು.

ಶ್ರೀಕೃಷ್ಣನು ಸತ್ಯಭಾಮೆಯನ್ನು ಬರಮಾಡಿಕೊಂಡನು. ನೀನು ಸ್ವಲ್ಪ ಸಮಯ ಶ್ರೀರಾಮನ ಪತ್ನಿ ಸೀತಾಮಾತೆಯಂತೆ ವೇಷಭೂಷಣ ಮಾಡಿಕೊಂಡು ನನ್ನ ಪಕ್ಕದಲ್ಲಿ ಕೂಡಬೇಕೆಂದು ತಿಳಿಸಿದನು. ತಾನು ಸ್ವತಃ ಶ್ರೀರಾಮಚಂದ್ರನಂತೆ ಧನುರ್ಧಾರಿಯಾಗಿ ಕುಳಿತುಕೊಂಡನು. ಹನುಮಂತನಿಗೆ ಶ್ರೀ ಸಿತಾರಾಮ ರೂಪವೆಂದರೆ ಪಂಚಪ್ರಾಣವಲ್ಲವೇ?

ಶ್ರೀಕೃಷ್ಣನು ಸುದರ್ಶನನನ್ನು ಬರಮಾಡಿಕೊಂಡು ಆತನಿಗೆ ಮಹಾದ್ವಾರ ಕಾಯುವಂತೆ ಅಪ್ಪಣೆ ಮಾಡಿದನು.

ಆಕಾಶದಲ್ಲಿ ಬರುತ್ತಿದ್ದ ಗರುಡನಿಗೆ ಸಸ್ಯಹಾರಿಯಾದ ಕೋತಿಗೆ ನನ್ನಷ್ಟು ವೇಗವಾಗಿ ಸಂಚರಿಸುವ ಶಕ್ತಿ ಹೇಗೆ ಬರಲು ಸಾಧ್ಯ? ಎಂದು ಹೆಮ್ಮೆಯಿಂದಲೇ ಮುಂದರಿಯತೊಡಗಿದನು.

ಅಂಜನಾಸುತನು ದ್ವಾರಕಾನಗರದ ಹೆಬ್ಬಾಗಿಲಿನ ಮುಂದೆ ಬಂದು ನಿಂತಾಗ ಸುದರ್ಶನನು ಆತನನ್ನು ತಡೆದು ನಿಲ್ಲಿಸಿದನು. ಆಗ ಹನುಮಂತನು ಆತನನ್ನು ಅನಾಯಾಸವಾಗಿ ತನ್ನ ಬಾಯಿಗೆ ಹಾಕಿಕೊಂಡು ಮುನ್ನಡೆದನು. ಶ್ರೀರಾಮಚಂದ್ರ ಪ್ರಭುವಿನ ಪಾದದದಲ್ಲಿ ತನ್ನ ಶಿರವನ್ನಿಟ್ಟು ಪ್ರಶ್ನೆ ಮಾಡಿದನು.

"ಪ್ರಭು, ನನ್ನ ಮಾತೆ ಜಾನಕಿ ದೇವಿಯಲ್ಲಿದ್ದಾಳೆ? ತ್ರಿಲೋಕ ಸುಂದರಿಯಾದ ಆ ದೇವಿಯ ಬದಲಾಗಿ ಓರ್ವ ದಾಸಿಯು ತಮ್ಮ ಪಕ್ಕದಲ್ಲಿ ಕುಳಿತುಕೊಳ್ಳಬಹುದೇ?" ಎಂದು ಪ್ರಶ್ನೆ ಮಾಡಿದನು.

ಆತನ ಮಾತನ್ನಾಲಿಸಿದ ಸತ್ಯಭಾಮಾದೇವಿಗೆ ಬಹು

ಸಂಕೋಚವೆನಿಸಿತು. ಅಷ್ಟರಲ್ಲಿ ವೈನತೇಯನು ಧಾವಿಸಿ ಬಂದನು. ತಾನು ಬರುವ ಮೊದಲೇ ಆಂಜನೇಯನು ಪ್ರಭುವಿನ ಸನ್ನಿಧಾನದಲ್ಲಿದ್ದುದನ್ನು ಕಂಡು ಆತನಿಗೆ ಬಹು ಅಚ್ಚರಿಯೆನಿಸಿತು. ತಾನೇ ಅತಿ ವೇಗವಾಗಿ ಸಂಚರಿಸುವವನು, ಮಹಾ ಬಲಶಾಲಿ ಎಂಬ ಅಹಂಕಾರವು ದೂರವಾಯಿತು. ಸತ್ಯಭಾಮೆಗೆ ತನ್ನ ರೂಪ ಲಾವಣ್ಯಗಳ ಮೋಹವು ಕಳಚಿದಂತಾಯಿತು.

ಮಾರುತಿ ಮಹಾದ್ವಾರದಲ್ಲಿ ನಿನ್ನನ್ನು ಯಾರೂ ತಡೆಯಲಿಲ್ಲವೆ? ಎಂದು ಕೇಳಿದಾಗ 'ಪ್ರಭು, ಸುದರ್ಶನನು ನನ್ನನ್ನು ತಡೆದು ನಿಲ್ಲಿಸಲು ಯತ್ನಿಸಿದನು. ಆಗ ನಾನು ಆತನನ್ನು ನನ್ನ ಬಾಯಿಯಲ್ಲಿ ಅಡಗಿಸಿಟ್ಟಿರುವೆ. ಎಂದು ಆತನನ್ನು ಹೊರಹಾಕಿದನು. ಇದರಿಂದ ಸುದರ್ಶನನ ಗರ್ವವು ಮಾಯವಾಯಿತು. ಹೀಗೆ ದ್ವಾರಕಾಧೀಶನು ತನ್ನ ಭಕ್ತರ ಅಹಂಕಾರವನ್ನು ಕಳೆದನು.

# ಕಲಾವಿದರ ಸ್ವರ್ಗ ಖಜುರಾಹೋ

ಚಂದೇಲರು ಶೌರ್ಯ ಸಾಹಸಗಳಿಗೆ ಖ್ಯಾತರಾದವರು. ಅವರು ತಮ್ಮ ವಿಜಯೋತ್ಸವದ ಸ್ಮರಣಾರ್ಥ ಕಲಾಸೌಂದರ್ಯದ ರಸಘಟ್ಟಿಯಂತೆ ಶೋಭಿಸುವ ಸುಂದರವಾದ ಅನೇಕ ದೇವಾಲಯಗಳನ್ನು ನಿರ್ಮಾಣ ಮಾಡಿದರು. ಅವರಿಂದ ನಿರ್ಮಾಣಗೊಂಡ ಎಂಬತ್ತೈದರಷ್ಟು ದೇವಾಲಯಗಳಲ್ಲಿ ಇಂದು ಕೇವಲ ಇಪ್ಪತ್ತೊಂದು ದೇವಾಲಯಗಳು ಮಾತ್ರ ಸುಸ್ಥಿತಿಯಲ್ಲಿ ಉಳಿದುಕೊಂಡಿರುವದು. ಧಾರ್ಮಿಕ ದೃಷ್ಟಿಯಿಂದ ಖಜುರಾಹೋದಲ್ಲಿ ಕಾಣುವ ದೇವಾಲಯಗಳಲ್ಲಿ ವೈಷ್ಣವ ದೇವಾಲಯ, ಶೈವ ದೇವಾಲಯ, ಜೈನ ದೇವಾಲಯ ಎಂದು ಮೂರು ವಿಭಾಗಗಳಲ್ಲಿ ವಿಂಗಡಿಸಬಹುದಾಗಿದೆ. ಶಿವನು ಚಂದೇಲರ ಪ್ರಧಾನ ಆರಾಧ್ಯ ದೈವನಾಗಿದ್ದಾನೆ. ಆತನು ಶಕ್ತಿಯ ಮಹಾ ಪ್ರತಿನಿಧಿ ಎಂದು ಪೂಜೆಗೊಂಡಿದ್ದಾನೆ. ಅದರಂತೆ ವಿಷ್ಣುವಿಗೂ ಅವರು ವಿಶೇಷ ಮಹತ್ವವನ್ನಿತ್ತಿದ್ದಾರೆ. ಲಕ್ಷ್ಮೀ ಸಮೇತನಾದ ಹಾಗೂ ಶೇಷಶಾಯಿಯಾದ ದೇವನನ್ನೂ ಅವರು ಪೂಜಿಸಿದ್ದಾರೆ. ಈ ದೇವಾಲಯಗಳಲ್ಲಿ ಪೂರ್ವ, ಪಶ್ಚಿಮ, ದಕ್ಷಿಣ ಎಂದು ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ. ಪ್ರತಿಯೊಂದು ದೇವಾಲಯಗಳೂ ಅತ್ಯಂತ ಮೋಹಕವಾದ ರೀತಿಯಲ್ಲಿ ನಿರ್ಮಾಣಗೊಂಡಿವೆ. ಸ್ವರ್ಗದಲ್ಲಿರುವ ದೇವನು ತನ್ನ ವೈಭವವನ್ನೆಲ್ಲ ಭೂಲೋಕದಲ್ಲಿ ಕಾಣುವಂತೆ ಮಾಡಿದವರು ಚಂದೇಲರು ಈ ಪ್ರಯತ್ನವು ಶಿಲ್ಪಕಲೆಯಲ್ಲಿ ಮೇರು ಕೃತಿಗಳೆನಿಸಿಕೊಳ್ಳುವಂತಹವು.

ಇಲ್ಲಿಯ ದೇವಾಲಯಗಳು ಮರುಳುಗಲ್ಲಿನಲ್ಲಿ ಕೆತ್ತಿದ ಸ್ಫುಟವಾದ ವಿಗ್ರಹಗಳಿಂದ ಕೂಡಿದವುಗಳಾಗಿವೆ. ಕೇನ ನದಿಯ ಪೂರ್ವಕ್ಕಿರುವ ಪನ

ಗಣಿಗಳಿಂದ ಈ ಕಲ್ಲುಗಳನ್ನು ತರಲಾಯಿತೆಂದು ತಿಳಿದು ಬರುತ್ತದೆ. ಈ ದೇವಾಲಯಗಳು ಇಂಡೋ ಆರ್ಯನ್ ಶೈಲಿಯಲ್ಲಿ ರಚಿಸಲಾಗಿದ್ದು, ಶಿಖರಗಳು ನಾಗರ ಶೈಲಿಯಲ್ಲಿವೆ. ಎಲ್ಲ ದೇವಾಲಯಗಳು ಹೆಚ್ಚು ಕಡಿಮೆ ಒಂದೇ ಶೈಲಿಯಲ್ಲಿವೆ.

ಖಜುರಾಹೋ ಮಧ್ಯಪ್ರದೇಶದ ಚತಾಪುರ ಜಿಲ್ಲೆಗೆ ಸೇರಿದೆ. ಪನ್ನಾದಿಂದ 43 ಕಿ.ಮೀ. ಅಂತರದಲ್ಲಿರುವ ಈ ಸ್ಥಳವನ್ನು ಮಾರೋಖಾ, ಹರಪಾಲಪುರ, ಸಾತನಾ ನಿಲ್ದಾಣಗಳ ಮೂಲಕ ಖಜುರಾಹೋ ತಲುಪಬಹುದು. ಅಥವಾ ದೆಹಲಿ, ಆಗ್ರಾ, ವಾರಣಾಸಿ ಮಾರ್ಗವಾಗಿಯೂ ಬರಬಹುದು. ಯಾತ್ರಿಕರ ಅನುಕೂಲಕ್ಕಾಗಿ ಪ್ರವಾಸಿ ಮಂದಿರ ಹಾಗೂ ಹೋಟಲುಗಳಿವೆ. ಖಜುರಾಹೋದ ಮಾರ್ಗವು ನಿಸರ್ಗ ಸೌಂದರ್ಯದಿಂದ ಕೂಡಿದುದಾಗಿದೆ.

ಭಾರತೀಯ ಶಿಲ್ಪಕಲೆಯ ದೃಷ್ಟಿಯಿಂದ ಖಜುರಾಹೋ ಬಹು ಮಹತ್ವದ ಸ್ಥಳ. ದೇಶವಿದೇಶಗಳ ಪ್ರವಾಸಿಗರು ತಂಡೋಪತಂಡವಾಗಿ ಇಲ್ಲಿಗೆ ಬರುವದುಂಟು. ಒಂದು ಕಾಲದಲ್ಲಿ ಬಹು ವೈಭವದಿಂದ ಮೆರೆದ ಈ ನಗರವು ಇಂದು ಕೇವಲ ಸಣ್ಣ ಹಳ್ಳಿಯಂತಾಗಿರುವದು. ಆದರೂ ಈ ಕಲಾವೈಭವವನ್ನು ಕಾಣಲು ಬಹು ಆಸಕ್ತಿಯಿಂದ ಪ್ರವಾಸಿಗರು ತಂಡೋಪತಂಡವಾಗಿ ಬರುತ್ತಾರೆ.

ಕ್ರಿ.ಶ. 9ನೇ ಶತಮಾನದಿಂದ 13ನೇ ಶತಮಾನದವರೆಗೆ ಮಧ್ಯಪ್ರದೇಶವನ್ನಾಳಿದ ಚಂದೇಲರಿಗೆಲ್ಲ ಖಜುರಾಹೋ ರಾಜಧಾನಿಯಾಗಿತ್ತು. ವಾಸ್ತು ಶಿಲ್ಪದ ದೃಷ್ಟಿಯಿಂದ ಇಲ್ಲಿಯ ದೇವಾಲಯಗಳು ಅದ್ಭುತ ರಮ್ಯ ಎಂದೆನಿಸಿಕೊಂಡಿವೆ. ಶಿಲ್ಪಗಳ ರಚನೆಯಲ್ಲಿ ಸೌಂದರ್ಯದೊಂದಿಗೆ ಲಾಲಿತ್ಯವನ್ನೂ ಸಹ ಇಲ್ಲಿ ಕಾಣಬಹುದಾಗಿದೆ. ಶಿಲ್ಪಿಯ ಮನೋಧರ್ಮದಲ್ಲಿ ಕಂಡುಬಂದ ಹೊಸ ದೃಷ್ಟಿಯನ್ನು ನಾವು ಇಲ್ಲಿ ಗುರುತಿಸಬಹುದಾಗಿದೆ. ಸೌಂದರ್ಯ ಪ್ರಿಯತೆಯೊಂದಿಗೆ ಅಲಂಕಾರದ

ವಿವಿಧ ವಿಧಾನವನ್ನೂ ಸಹ ನಾವು ಇಲ್ಲಿಯ ವಿಗ್ರಹಗಳಲ್ಲಿ ಕಾಣಬಹುದು. ಮಧ್ಯಯುಗದ ಇನ್ನೊಂದು ವೈಶಿಷ್ಟ್ಯವೆಂದರೆ ಮಿಥುನ ಶಿಲ್ಪಗಳ ವಿಪುಲವಾದ ನಿರ್ಮಾಣ. ಈ ಶೈಲಿಯನ್ನು ನಾವು ಸಾಂಚಿಯಲ್ಲಿ, ಕೋನಾರ್ಕ ದಲ್ಲಿಯೂ ಕಾಣಬಹುದು. ಕೆಲವು ಸಂದರ್ಭದಲ್ಲಿ ಮಿಥುನ ಶೈಲಿಗೆ ಮಿತಿಮೀರಿದ ಸ್ಥಾನವನ್ನೀಯಲಾಗಿದೆ ಎಂದೆನಿಸುವದುಂಟು. ಶಿಲ್ಪಕಲೆಯ ಮಿಕ್ಕ ಅಂಶಗಳ ಜೊತೆಗೆ ಶೃಂಗಾರಮಯ ಹೆಣ್ಣಿನ ಆಕೃತಿಗಳಲ್ಲಿ ಕಾಮೋದ್ದೀಪಕವೆನಿಸಬಹುದಾದ ವಿಭಾಗಗಳನ್ನೂ ತೇಲಿಸಿರುವದನ್ನು ಕಂಡಾಗ ಅಂದಿನ ಕಲಾವಿದರು ಮಹಾರಸಿಕರೆಂದೇ ಭಾವನೆಯಾಗುವದು. ಹೆಣ್ಣನ್ನು ನಾನಾ ಭಂಗಿಗಳಲ್ಲಿ ಸೃಷ್ಟಿಸಿ ಕಾಮಸೂತ್ರದ ಮಹಾ ಪರಂಪರೆಯನ್ನೇ ಕೃತಿರೂಪದಲ್ಲಿಳಿಸಿದರೆಂಬಂತೆ ತೋರಿ ಬರುವದು.

ಹತ್ತನೇ ಶತಮಾನದಲ್ಲಾಳಿದ ಚಂದೇಲರ ದೊರೆ ಹರ್ಷ ಈತನು ಖಜುರಾಹೋ, ಕಾಲಂಜರಾ, ಮಹೋಬಾ, ಅಜಯಗಡ ಮೊದಲಾದವುಗಳನ್ನು ತನ್ನ ಕೇಂದ್ರಸ್ಥಾನಗಳನ್ನಾಗಿ ಮಾಡಿಕೊಂಡನು. ಈತನ ಮಗನೇ ಶಯೋವರ್ಮ (ಲಕ್ಷ್ಮಣವರ್ಮ). ಈತನು ಮಹಾ ಬಲಶಾಲಿ. ಇಲ್ಲಿಯ ಚತುರ್ಭುಜ ದೇವಾಲಯಗಳೆಲ್ಲ ಈತನ ಕಾಲದಲ್ಲಿ ರಚಿತವಾದವು. ಈತನು ಮಗ ಡಾಂಗಾ ಕ್ರಿ.ಶ. 950ರಲ್ಲಿ ಚಂದೇಲರ ದೊರೆಯಾದ ಈತನು ತನ್ನ ದೀರ್ಘಕಾಲದ ಆಡಳಿತದಲ್ಲಿ ವಿಜಯೋತ್ಸವಾದಿಗಳಿಂದ ಉತ್ತರ ಭಾರತದಲ್ಲಿ ಬಲಿಷ್ಠ ಸಾಮ್ರಾಜ್ಯವನ್ನೇ ಸ್ಥಾಪಿಸಿದನು. ಕಲೆಗಳಿಗೆ ಆಶ್ರಯದಾತನೆನಿಸಿದ. ವಿಶಾಲ ಮನೋಭಾವದ ಈತನ ಕಾಲಾವಧಿಯಲ್ಲಿ ಪಾರ್ಶ್ವನಾಥ ದೇವಮಂದಿರವನ್ನೊಳಗೊಂಡಂತೆ ಕೆಲವು ಜೈನ ಮಂದಿರಗಳನ್ನೂ ಕಟ್ಟಿಸಿದನು. ಮುಂದೆ ಹನ್ನೊಂದನೇ ಶತಮಾನದ ಪ್ರಾರಂಭದಲ್ಲಿ ಇದೇ ವಂಶದ ವಿದ್ಯಾಧರನೆಂಬ ಅರಸನು ಬಹು ಪ್ರಸಿದ್ಧಿ ಬರುವಂತಾದನು. ಈತನ ಕಾಲದಲ್ಲಿ ಚಂದೇಲ ರಾಜ್ಯವು ಸಮೃದ್ಧಿಯ ಶಿಖರಕ್ಕೆ ತಲುಪಿತು. ಈತನು ಪರಕೀಯರ ದಾಳಿಯನ್ನೆದುರಿಸಿ ಸಾಮ್ರಾಜ್ಯವನ್ನು ಭದ್ರಪಡಿಸಿಕೊಂಡನು. ಈತನ ಕಾಲದಲ್ಲಿ ಬಹು

ಸುಂದರವಾದ ''ಕಾಂಡಾರ್ಯ ಮಹಾದೇವನ ಮಂದಿರ''ವು ನಿರ್ಮಾಣವಾಯಿತು. ಈ ದೊರೆಗಳ ಕಾಲಾವಧಿಯಲ್ಲಿ ''ಪ್ರಭೋಧ ಚಂದ್ರೋದಯ'' ಎಂಬ ಹೆಸರಿನ ಸಂಸ್ಕೃತ ನಾಟಕವು ಕವಿ ಕೃಷ್ಣವರ್ಮನಿಂದ ರಚಿತವಾಯಿತು. ಹದಿಮೂರನೇ ಶತಮಾನದ ಕೊನೆಯ ಭಾಗದಲ್ಲಿ ಚಂದೇಲರ ಆಳ್ವಿಕೆಯು ಕೊನೆಗೊಂಡಿತು.

ಸುಮಾರು 4000 ಜನಸಂಖ್ಯೆಯ ಖಜುರಾಹೋ ನೈನೋರಾತಾಲ ಎಂಬ ಹೆಸರಿನ ಕೆರೆಯ ದಂಡೆಯ ಮೇಲಿದೆ. ಇದನ್ನು ಪ್ರಾಚೀನ ಕಾಲದಲ್ಲಿ ''ವಾತ್ಸಾ'' ಎಂಬ ಹೆಸರಿನಿಂದ ಕರೆಯುತ್ತಿದ್ದರು. ಈ ಪ್ರದೇಶದ ಸುತ್ತಮುತ್ತ ''ಖಜ್ಜಾರ'' (ಉತ್ಪತ್ತಿ)ಯ ಮರಗಳಿದ್ದವು. ಅದ್ದರಿಂದ ''ಖರ್ಜೂರವಾಹಕ'' ಎಂಬ ಹೆಸರಿನಿಂದಲೂ ಕರೆಯುತ್ತಿದ್ದರು. ಮುಂದೆ ಹದಿನಾಲ್ಕನೇ ಶತಮಾನದಲ್ಲಿ ಬುಂದೇಲಖಂಡ ಎಂಬ ಹೆಸರಿನಿಂದ ಈ ಭಾಗವನ್ನು ಗುರುತಿಸತೊಡಗಿದರೆಂದು ತಿಳಿದು ಬರುವದು. ಕಾಲಾಂತರದಲ್ಲಿ ಶಿಲ್ಪ ಸೌಂದರ್ಯಕ್ಕೆ ಅನ್ವರ್ಥವಾದ ಹೆಸರು ಖಜುರಾಹೋ ಎಂದೆನಿಸಿಕೊಂಡಿತು. ಇಲ್ಲಿಯ ಶಿಲ್ಪ ಸಂಪತ್ತು ಹೆಚ್ಚೆ ಹೆಚ್ಚಿಗೂ ಪ್ರೇಕ್ಷಕರ ಮನವನ್ನು ವಿಸ್ಮಯಗೊಳಿಸುವದು. ದೇವದೇವತೆಯರ ವಿಗ್ರಹಗಳು, ಅವರ ನಾನಾ ಭಂಗಿಗಳು, ಲಾಲಿತ್ಯಪೂರ್ಣವಾದ ನೃತ್ಯರೂಪಕಗಳು, ಭಾವಭಕ್ತಿಯ ಚಲನೆಯಲ್ಲಿ ನಮ್ಮನ್ನು ತೇಲಿಸುವ ಕೋಮಲ ರೇಖಾ ಚಿತ್ರಗಳು, ಅಂಗ ಪ್ರತ್ಯಂಗಗಳ ಸ್ಫುಟವಾದ ಪ್ರದರ್ಶನಗಳು, ಒನಪು ವೈಯಾಗಳಿಂದ ಕೂಡಿದ ಈ ಶಿಲ್ಪಕೃತಿಗಳ ರತಿವಿಲಾಸದ ಅಪ್ಸರೆಯರ ಆಕೃತಿಗಳು ಪ್ರೇಕ್ಷಕನ ಇಂದ್ರಿಯಗಳನ್ನು ಮಿಡಿಯುವಂತೆ ಮಾಡುವ ಶಿಲ್ಪಸಮೂಹದ ಸಾಲುಗಳನ್ನು ನೋಡುತ್ತ ಹೋದಂತೆ ಮನ ಕಲಾಶ್ರೀಯ ದಿವ್ಯ ಸಾನ್ನಿಧ್ಯದಲ್ಲಿ ರಮಿಸಿದಂತಹ ಅನುಭವವಾಗುತವದು. ಕಲ್ಪನೆಯ ಮನೋವಿಲಾಸದ ಮಿಂಚನ್ನೇ ಕಂಡ ಅನುಭವವಾಗುತ್ತದೆ. ಮಾನವ ದೇಹವನ್ನು ಅತ್ಯಾಕರ್ಷಕವಾಗಿ ಪ್ರದರ್ಶಿಸುವಲ್ಲಿ ಸೌಂದರ್ಯವನ್ನೇ ಕರಗಿಸಿ ಎರಕ ಹೊಯ್ದಂತೆ ಭಾಸವಾಗುತ್ತದೆ. ಇದೆಲ್ಲ ಭಾರತೀಯ ಶಿಲ್ಪಕಲೆಯ

ಪ್ರತಿಭೆಯಾಗಿದೆ. ಲಾಲಿತ್ಯವನ್ನೇ ಚಿಮ್ಮಿಸಿ ಭಾವೋದ್ವೇಗವನ್ನು ಕೆರಳಿಸುವ ಈ ಕೃತಿಗಳ ಹಿಂದೆ ವಿಕೃತ ಕಾಮದೊಂದಿಗೆ ಪವಿತ್ರ ಪ್ರೇಮದ ಮುಗ್ಧ ಮುಖಗಳನ್ನೂ ಸಹ ನಾವು ಇಲ್ಲಿ ನೋಡಬಹುದಾಗಿದೆ. ಖಜುರಾಹೋ ಒಂದು ರೀತಿಯಲ್ಲಿ ಸೌಂದರ್ಯದ ಮಹಾ ಜಗತ್ತೆಂದು ಭಾವಿಸಿದಲ್ಲಿ ತಪ್ಪಾಗಲಾರದು. ಈ ದೇವಾಲಯಗಳ ಹೊರಭಾಗದಲ್ಲಿ ರಚಿತವಾದ ಕೃತಿಗಳಲ್ಲಿ ಆನೆಗಳ ಸಾಲುಗಳೊಂದಿಗೆ ಕೆಲವು ಕಡೆಗಳಲ್ಲಿ ಜಿಂಕೆ ಹಾಗೂ ಗಿಳಿಗಳನ್ನೂ ಸಹ ನೋಡಬಹುದು. ಅದೇ ರೀತಿಯಲ್ಲಿ ತನ್ನ ನಿಯನಿಗೆ ಒಲವಿನ ಪತ್ರ ಬರೆಯಲು ಸಿದ್ಧಳಾದ ಮೋಹಿನಿಯ ರೂಪವನ್ನೂ ಕಾಣಬಹುದು. ಭಾರತೀಯ ಶಿಲ್ಪಶಾಸ್ತ್ರದ ವಿನ್ಯಾಸದ ಅನೇಕ ಭಾವಭಂಗಿಗಳು ಕಲಾಭ್ಯಾಸಿಗಳಿಗೆ ಇಲ್ಲಿ ಕೈಮಾಡಿ ಕರೆಯುತ್ತಿವೆ ಎಂದೆನಿಸುವದು.

ದೇವಾಲಯಗಳನ್ನು ಪ್ರವೇಶ ಮಾಡುವಾಗ ಮಕರ ತೋರಣಗಳಲ್ಲಿ ಗುಪ್ತರ ಕಾಲದ ಶೈಲಿಯ ಲಕ್ಷಣಗಳು ಕಾಣಬರುವವು. ಗರ್ಭಗೃಹ ಪ್ರವೇಶಿಸುತ್ತಿದ್ದಂತೆ, ವಿಷ್ಣು ಹಾಗೂ ಮಹದೇವ ಮೊದಲಾದವರ ಮೋಹಕ ವಿಗ್ರಹಗಳು ಯಾತ್ರಿಕರ ಕಣ್ಮನಗಳನ್ನು ತಣಿಸುವವು. ಇಲ್ಲಿರುವ ಲಕ್ಷ್ಮಣ ದೇವಾಲಯದ ಕಲಾಕೃತಿಯಂತೂ ಅತ್ಯುನ್ನತ ಮಟ್ಟದ ಗುಣಾಂಶವನ್ನು ಹೊಂದಿರುವದು. ಶಿಲ್ಪಕಲೆಯ ವಿಶಿಷ್ಟ ಲಕ್ಷಣಗಳೆಲ್ಲವೂ ಈ ದೇವಾಲಯದಲ್ಲಿ ಕಾಣಬಹುದು. ಚಿತ್ರಗುಪ್ತ ದೇವಾಲಯವಂತೂ ಸೂರ್ಯದೇವನಿಗೆ ಅರ್ಪಿತವಾಗಿರುವದು. ಇದು ಸ್ವಲ್ಪ ಹೆಚ್ಚು ಕಡಿಮೆ ಜಗದಂಬೆಯ ದೇವಾಲಯವನ್ನೇ ಹೋಲುವದು.

ಕಾಂಡಾರ್ಯ ಮಹಾದೇವನ ದೇವಾಲಯವಂತೂ ಖಜುರಾಹೋದಲ್ಲಿಯೇ ಅತ್ಯಂತ ಸುಂದರವಾದ ದೇವಾಲಯ. ಇದು 109 ಅಡಿ ಉದ್ದ, 60 ಅಡಿ ಅಗಲ. ಭೂಮಿಯಿಂದ 116 ಅಡಿ ಎತ್ತರದಲ್ಲಿರುವದು. ಈ ಭವ್ಯ ದೇವಾಲಯವು ಚಂದೇಲರ ಕಲಾ ಕೃತಿಗೆ ಉತ್ಕೃಷ್ಟ ನಿದರ್ಶನವೆನಿಸುವದು. ಖಜುರಾಹೋದ ಹಳ್ಳಿಗೆ ಹೊಂದಿಕೊಂಡು

ಸ್ವಲ್ಪ ದೂರದಲ್ಲಿ ಅಗ್ನೆಯ ಭಾಗದಲ್ಲಿ ಕೆಲವು ಜೈನಮಂದಿರಗಳಿರುವವು. ಇಲ್ಲಿಯ ಪಾರ್ಶ್ವನಾಥ ದೇವಾಲಯವು ಬಹು ಸುಂದರವಾಗಿರುವದು. ಖಜುರಾಹೋದಿಂದ ಮೂರು ಕಿ.ಮೀ. ಅಂತರದಲ್ಲಿ ಚತುರ್ಭುಜ ನಾರಾಯಣನ ದೇವಾಲಯವಿರುವದು. ಈ ದೇವಾಲಯದಲ್ಲಿ ಮಾತ್ರ ಮಿಥುನ ಶೈಲಿಯ ಶಿಲ್ಪಗಳು ಕಾಣಸಿಗುವುದಿಲ್ಲ. ನಮ್ಮ (ಕರ್ನಾಟಕ) ನಾಡಿನಲ್ಲಿ ಬೇಲೂರಿನಲ್ಲಿ ಯಾವ ರೀತಿ ಹೊಯ್ಸಳನ ವಿಗ್ರಹವಿದೆಯೋ ಅದೇ ರೀತಿಯಲ್ಲಿ ಚಂದೇಲರ ರಾಜಲಾಂಛನವು ಸಿಂಹ ಹಾಗೂ ರಾಜಕುಮಾರನನ್ನು ಬಿಡಿಸಿರುವುದನ್ನು ನಾವು ಮಹಾದೇವನ ದೇವಾಲಯದಲ್ಲಿ ಕಾಣಬಹುದಾಗಿದೆ.

ಖಜುರಾಹೋದ ದೇವಾಲಯಗಳು ಧರ್ಮ, ಅರ್ಥ, ಕಾಮಗಳ ತ್ರಿವೇಣಿ ಸಂಗಮದಂತಿರುವವು. ಸಾಂಸ್ಕೃತಿಕ ಸಂಶೋಧಕರಿಗೆಲ್ಲ ಇಲ್ಲಿ ಸಾಕಷ್ಟು ಶೋಧನೆಗೆ ಅವಕಾಶವಿರುವದು. ಭಾರತದ ಅನೇಕ ದೇವಾಲಯಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಮಿಥುನಶಿಲ್ಪವನ್ನು ನಾವು ಖಂಡಿತ ಕಾಣುವದುಂಟು. ಆದರೆ ಮೈಮನಗಳ ಲಜ್ಜೆಯ ಚೌಕಟ್ಟನ್ನು ಮೀರಿ ಇಲ್ಲಿಯ ದೇವಾಲಯಗಳಲ್ಲಿ ಮಿಥುನ ಶೈಲಿಯ ವಿಗ್ರಹಗಳನ್ನು ನಾವು ಕಾಣಬಹುದು. ಕಾಮ ಜೀವನದ ಉದ್ರಿಕ್ತ ವಿವರಗಳು ಇಲ್ಲಿ ಕಾಣಸಿಗುವವು. ಆದರೆ ಅತಿರೇಕದಲ್ಲಿ ಕಲಾ ಸೌಂದರ್ಯಕ್ಕೆ ಮಾತ್ರ ಯಾವ ಕುಂದನ್ನೂ ಸಹ ಕಾಣಲು ಸಾಧ್ಯವಿಲ್ಲ.

ಹಿಂದೂ ಧರ್ಮದಲ್ಲಿ ಕಾಮವು ಬಾಳಿನ ಅವಶ್ಯಕತೆಯಲ್ಲಿ ಒಂದಾಗಿರುವದು. ಪುರುಷಾರ್ಥದಲ್ಲಿ ಒಂದೆನಿಸಿದ ಇಂದ್ರಿಯಾನಂದವು ಮೋಕ್ಷಕ್ಕೆ ಅನಿವಾರ್ಯವಾದುದೆಂಬ ವಾದವೂ ಒಂದಿರುವದು. ಆದುದರಿಂದಲೇ ನಮ್ಮ ಪ್ರಾಚೀನರು ಕಾಮಕ್ಕೂ ಸಹ ಗಣನೀಯ ಸ್ಥಾನವನ್ನಿತ್ತಿರುವದುಂಟು. ಭೋಗವು ಯೋಗಕ್ಕೆ ದಾರಿ ಎಂಬ ಮಾತೂ ಉಂಟು. ಸಾಮಾನ್ಯ ದೃಷ್ಟಿಯಿಂದಲೂ ಸಹ ರತಿ ಕ್ರೀಡೆ ಇದು ಜೀವಿಗಳಿಗೆಲ್ಲ (ಪಶುಪಕ್ಷಿಗಳಿಗೂ) ಸಹಜವಾದ ಕ್ರಿಯೆ ಎಂದೆನಿಸಿರುವದು. ಇದು ನಿಸರ್ಗ

ಸಹಜವಾದ ಕ್ರಿಯೆ. ಇದಕ್ಕಾಗಿ ಮಾನವನು ಮಾತ್ರ ಕೆಲವು ನಿರ್ಬಂಧಗಳನ್ನು ಹಾಕಿಕೊಂಡಿರುವದುಂಟು. ಪ್ರಕೃತಿಯ ಮೂಲವು ಈ ರಹಸ್ಯದೊಂದಿಗೆ ಅನಂತ ಹಾಗೂ ಅನಾದಿ ಶಕ್ತಿಯನ್ನೊಳಗೊಂಡಿರುವದನ್ನು ನಮ್ಮ ಪ್ರಾಚೀನ ಗ್ರಂಥಗಳು ಪ್ರತಿಪಾದಿಸಿರುವವು. ಅದುದರಿಂದ ಖಜುರಾಹೋದ ಶಿಲ್ಪಕಲೆಯು ಮಾನವ ವಿಕಾಸದ ಕ್ರಿಯೆಯನ್ನು ಅಭಿವ್ಯಕ್ತಿಗೊಳಿಸುವದೆಂದು ಭಾವಿಸಿದಲ್ಲಿ ತಪ್ಪಾಗಲಾರದು.

ಖಜುರಾಹೋದಲ್ಲಿ ನಡೆಯುವ ವಸಂತೋತ್ಸವವನ್ನು ಮಧ್ಯಪ್ರದೇಶದ ಪ್ರವಾಸೋದ್ಯಮ ಇಲಾಖೆಯು ಬಹು ಆಸಕ್ತಿಯಿಂದ ನಡೆಸಿಕೊಂಡು ಬಂದಿರುವದು. ಮನೋರಂಜನೆಗಾಗಿ ಭರತನಾಟ್ಯ, ಕುಚಪುಡಿ, ಒಡಿಸ್ಸಿ ಮೊದಲಾದ ಕಾರ್ಯಕ್ರಮಗಳನ್ನು ವಿಶಾಲವಾದ ಇಲ್ಲಿಯಾ ದೇವಾಲಯಗಳ ಮುಂದೆ ಏರ್ಪಡಿಸುವದುಂಟು. ಶಾಸ್ತ್ರೀಯ ನೃತ್ಯಗಳಲ್ಲದೆ ''ವಂಸತಮೇಳ''ವೂ ನಡೆಸಲಾಗುವದು. ಪ್ರವಾಸಿಗರು ಬಹು ಉತ್ಸಾಹದಿಂದ ಈ ವಸಂತೋತ್ಸವದಲ್ಲಿ ಪಾಲ್ಗೊಳ್ಳುವರು. ಆ ಸಂದರ್ಭದಲ್ಲಿ ಜಾನಪದ ನೃತ್ಯಗಳು ನಡೆಯುವದುಂಟು. ಇಲ್ಲಿಯ ಬಸ್ ನಿಲ್ದಾಣದಿಂದ ಸ್ವಲ್ಪ ದೂರದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯವಿರುವದು. ಇದನ್ನು 1967ರಲ್ಲಿ ಸ್ಥಾಪಿಸಲಾಗಿರುವದು. ಅನೇಕ ವಿವರಗಳಿಂದ ಕೂಡಿದ ಶಿಲ್ಪಗಳ ಮಾದರಿಯನ್ನು ಇಲ್ಲಿ ನಾವು ನೋಡಬಹುದಾಗಿದೆ. ಜೀವನದಲ್ಲಿ ಕಲಾರಸಿಕರು ಒಂದು ಸಲವಾದರೂ ಖಜುರಾಹೋ ನೋಡಿಬರುವದು ವಿಹಿತವೆಂದು ಹೇಳಿದಲ್ಲಿ ತಪ್ಪಾಗಲಾರದು.

# ತ್ರಿಚ್ಯೂರ ವಡಕ್ಕುನಾಥ ದೇವಮಂದಿರ

ವನ್ಯಜೀವಿಗಳಲ್ಲಿ ಆನೆಯಷ್ಟು ಜನಪ್ರಿಯ ಪ್ರಾಣಿ ಬೇರೊಂದಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಅದಕ್ಕೊಂದು ಮಹತ್ವದ ಸ್ಥಾನವಿದೆ. ಗಜರಾಜನು ರಾಷ್ಟ್ರದ ಹೆಮ್ಮೆಯ ಸಂಕೇತವೆಂಬ ಭಾವನೆಯೂ ಇದೆ. ಧನುರ್ಧಾರಿ ಅರ್ಜುನನು ತನ್ನ ತಾಯಿ ಕುಂತೀದೇವಿಯ ಪೂಜೆಗೆ ಇಂದ್ರನ ಐರಾವತವನ್ನೇ ಧರೆಗಿಳಿಯುವಂತೆ ಮಾಡಿದ ಕಥಾಭಾಗವಿದೆ. ಆನೆಗಳನ್ನು ಮುಂದಿಟ್ಟುಕೊಂಡು ನಡೆಸುವ ಉತ್ಸವವನ್ನು ನೋಡಿ ಆನಂದಿಸಬೇಕಾದಲ್ಲಿ ನಾವು ದಕ್ಷಿಣ ಭಾರತದ ತುದಿ ಅಂಚಿನ ಕೇರಳ ರಾಜ್ಯದಲ್ಲಿರುವ ತ್ರಿಚ್ಯೂರಿಗೆ ಹೋಗಬೇಕು. ಅಲ್ಲಿ ನಡೆಯುವಂಥ ಪೂನಮ್ ಮೇಳವು ವಿಶ್ವದ ಯಾವ ಭಾಗದಲ್ಲಿಯೂ ಕಾಣಸಿಗುವುದಿಲ್ಲ.

ತ್ರಿಚ್ಯೂರಿಗೆ ಬಹು ಪ್ರಾಚೀನ ಇತಿಹಾಸವಿದೆ. ಇಲ್ಲಿರುವ ದೇವಾಲಯಗಳೆಲ್ಲ ಭಾರ್ಗವರಾಮನಿಂದ ಸ್ಥಾಪಿಸಲ್ಪಟ್ಟಿವೆ ಎಂಬ ನಂಬಿಕೆ ಇದೆ. ಈ ಸ್ಥಳದಲ್ಲಿಯೇ ಪರಶುರಾಮನು ತಪಗೈದನೆಂಬ ಐತಿಹ್ಯವಿದೆ. ಆದುದರಿಂದ ತ್ರಿಚ್ಯೂರು ದಕ್ಷಿಣದ ಕೈಲಾಸವೆಂಬ ಸ್ಥಾನವನ್ನು ಪಡೆದಿದೆ. ಶಿವ ಪಾರ್ವತಿಯರು ಭೂಲೋಕದ ಪ್ರವಾಸವನ್ನಾರಂಭಿಸಿದಾಗ ಅವರ ವಾಹನವೆನಿಸಿದ ನಂದಿಯು ಈ ಸ್ಥಳದಲ್ಲಿಯೇ ನಿಂತುಕೊಂಡಿತೆಂದೂ ಪತಿಪತ್ನಿಯರಿಬ್ಬರೂ ಅದೇ ಸ್ಥಳದಲ್ಲಿ ವಿರಾಜಮಾನರಾದರೆಂಬ ಭಾವನೆ ಇದೆ. ಈ ನಗರವನ್ನು ಆಂಗ್ಲರು Thrissur ಎಂದು ಅಪಭ್ರಂಶವಾಗಿ ಉಚ್ಚರಿಸತೊಡಗಿದರು. ಅದು Tirusivperiyar ಎಂಬುದಾಗಿದೆ.

ಭಾರತದ ಅನೇಕ ಪುಣ್ಯಕ್ಷೇತ್ರಗಳಂತೆ ತ್ರಿಚ್ಯೂರು ಸಹ ಅನೇಕ ಏರಿಳಿತಗಳನ್ನು ಕಂಡಿದೆ. 1789ರಲ್ಲಿ ಮೈಸೂರಿನ ಟೀಪು ಈ ನಗರಕ್ಕೆ

ಬಂದು ಹೋದ ಬಗ್ಗೆ ದಾಖಲೆಗಳಿವೆ. ಅನಂತರ ಈ ನಗರವು ರಾಜಾ ರಾಮವರ್ಮರ ಕಾಲದಲ್ಲಿ ಅಭಿವೃದ್ಧಿಗೆ ಬರುವಂತಾಯಿತು. ಆತನ ಕಾಲದಲ್ಲಿ ವಡಕ್ಕು ನಾಥಂ ದೇವಾಲಯದ ಸುತ್ತಮುತ್ತಲೂ ಬೆಳೆದು ಬಂದ ಸಾಗವಾನಿಯ ಕಾಡನ್ನೆಲ್ಲ ಕಡಿದು ಅಲ್ಲಿ ವಿಶಾಲವಾದ ಮೈದಾನವನ್ನು ನಿರ್ಮಿಸಲಾಯಿತು. ನಗರದ ಪಶ್ಚಿಮ ಭಾಗದಲ್ಲಿ ನಾಯರ್ ಹಾಗೂ ನಂಬೂದ್ರಿಗಳೇ ಹೆಚ್ಚಾಗಿ ವಾಸ ಮಾಡಿದರೆ, ಪೂರ್ವ ಹಾಗೂ ದಕ್ಷಿಣ ಭಾಗದಲ್ಲಿ ಕ್ರೈಸ್ತರ ಸಂಖ್ಯೆಯು ಹೆಚ್ಚಾಗಿ ಕಾಣುವಂತಾಗಿರುವದು. ಉತ್ತರ ಭಾಗದಲ್ಲಿ ರಾಜಗೃಹಗಳಿವೆ. ಹೀಗಾಗಿ ತ್ರಿಚ್ಚೂರು ಬಹು ಸುಂದರವಾಗಿ ಬೆಳೆದಿದೆ. ಈ ರಾಜ್ಯದ ದಿವಾನರಾಗಿದ್ದ ಶಂಕರಪರಿಯಾರ ಇವರ ಕಾಲದಲ್ಲಿ 1902ರಲ್ಲಿ ತ್ರಿಚ್ಚೂರ - ಶೋರನೂರು ರೈಲುಮಾರ್ಗವು ನಿರ್ಮಾಣಗೊಂಡಿತು. ಅನಂತರ 1910ರಿಂದ ಇಲ್ಲಿ ಮುನಿಸಿಪಾಲಿಟಿಯನ್ನೂ ಕಾಣುವಂತಾಗಿರುವದು.

ಬಹು ಎತ್ತರವಾದ ಭೂಭಾಗದಲ್ಲಿ ತ್ರಿಚ್ಚೂರು ನಿರ್ಮಾಣಗೊಂಡಿದೆ. ಸುಪ್ರಸಿದ್ಧ ವಡಕ್ಕುನಾಥ ದೇವಮಂದಿರವು ಮಧ್ಯಭಾಗದಲ್ಲಿದೆ. ಈ ಭಾಗದಲ್ಲಿ ದೇವಾಲಯಗಳ ಒಂದು ಸಮೂಹವನ್ನೇ ನಾವು ಕಾಣಬಹುದಾಗಿದೆ. ಕೇರಳ ರಾಜ್ಯದಲ್ಲಿಯೇ ಇಲ್ಲಿಯ ದೇವಾಲಯಗಳು ಬಹು ಪ್ರಸಿದ್ಧಿಯನ್ನು ಹೊಂದಿವೆ. ಆರವತ್ತು ಎಕರೆ ವಿಸ್ತೀರ್ಣವನ್ನು ಈ ದೇವಾಲಯಗಳು ಹೊಂದಿವೆ. ದೇವಾಲಯಗಳಿಗೆ ಹೊಂದಿ ಕೊಂಡು ವರ್ತುಲಾಕಾರವಾದ ಅಷ್ಟೇ ವಿಶಾಲವಾದ ಭಾಗವನ್ನು ಬಿಡಲಾಗಿದೆ.

ದೇವಸ್ಥಾನವನ್ನು ಪ್ರವೇಶ ಮಾಡಿದೊಡನೆ ಉತ್ತರ ಭಾಗದಲ್ಲಿ ಶಿವಮಂದಿರವಿದ್ದರೆ, ದಕ್ಷಿಣ ಭಾಗದಲ್ಲಿ ಎರಡಂತಸ್ತಿನ ಕಟ್ಟಡದಲ್ಲಿ ಶ್ರೀರಾಮನ ಸನ್ನಿಧಿಯಿದೆ. ಈ ಎರಡೂ ದೇವಸ್ಥಾನಗಳ ಮಧ್ಯಭಾಗದಲ್ಲಿ ಶಂಕರನಾರಾಯಣ ಮಂದಿರವಿದೆ. ಅದೇ ರೀತಿ ಗಣೇಶ ಮಂದಿರ,

ಕೃಷ್ಣಮಂದಿರ, ಪರಶುರಾಮ ದೇವಾಲಯ, ಬಸವಣ್ಣನ ದೇವಾಲಯ, ಶಂಕರ ಭಗವತ್ಪಾದರ ಸನ್ನಿಧಿ, ನವಗ್ರಹಗಳ ಸಮೂಹ ಹೀಗೆ ನಾನಾ ದೇವತೆಗಳನ್ನು ಇಲ್ಲಿ ಕಾಣಬಹುದಾಗಿದೆ. ಇಲ್ಲಿರುವ ಶಿವಲಿಂಗಕ್ಕೆ ತುಪ್ಪದ ಧಾರೆ ಬೀಳುವುದನ್ನು ನೋಡುವದೇ ಆನಂದದಾಯಕವೆನಿಸುವುದು. ಪ್ರತಿದಿನ ಎಳೇ ನೀರಿನ ಅಭಿಷೇಕವೂ ನಡೆಯುವದುಂಟು. ಈ ದೇವಾಲಯಕ್ಕೆ ಹವೆ ಹೊರ ಹೋಗಲು ಕಿಡಕಿಗಳಿಲ್ಲ. ಆದರೂ ಮಹದೇವನಿಗೆ ಅರ್ಪಿತವಾದ ತುಪ್ಪವು ಶಾಖಕ್ಕೆ ಕರಗಿ ಹರಿಯದೆ ಧವಳ ಶಿಖರದಂತೆ ಅಲ್ಲಿಯೇ ನಿಲ್ಲುವುದನ್ನು ಕಂಡಾಗ ಅಚ್ಚರಿಯೆನಿಸುತ್ತದೆ. ಕೆಲ ವಿಶೇಷ ದಿನಗಳಲ್ಲಂತೂ ತುಪ್ಪದ ಅಭಿಷೇಕವು ಹೆಚ್ಚು ಹೆಚ್ಚಾಗಿಯೇ ನಡೆಯುತ್ತದೆ.

ಶಿವಪತ್ನಿ ಪಾರ್ವತಿ ದೇವಿಗೆ ತನ್ನ ಇನಿಯನು ಗಂಗೆಯನ್ನು ಶಿರೋಭಾಗದಲ್ಲಿರಿಸಿಕೊಂಡ ನಿಮಿತ್ತದಿಂದ ಅವಳು ಕುಪಿತಳಾಗಿ ಮುಖ ತಿರುವಿಕೊಂಡಿದ್ದಾಳೆಂದು ಹೇಳುವದುಂಟು. ಶಿವ ಪಾರ್ವತಿಯರ ನೆಚ್ಚಿನ ಬಂಟ ನಂದಿಯೂ ಸಹ ಪ್ರತ್ಯೇಕವಾಗಿಯೇ ಸ್ಥಾಪನೆಗೊಂಡಿರುವದುಂಟು. ಇಲ್ಲಿ ಗೋಶಾಲೆಯನ್ನೊಳಗೊಂಡ ಶ್ರೀ ಕೃಷ್ಣ ದೇವಾಲಯ ಹಾಗೂ ರಾಮರ ಸನ್ನಿಧಾನಗಳೂ ಇವೆ. ಹರಿಹರರಲ್ಲಿ ಭೇದವಿಲ್ಲವೆಂಬ ಮಾತಿಗೆ ಸಾಕ್ಷೀಭೂತರಾಗಿ ಶಂಕರನಾರಾಯಣ ದೇವಮಂದಿರವೂ ಇದೆ. ಅರ್ಧನಾರೀಶ್ವರ ರೂಪವನ್ನೂ ಸಹ ನಾವು ಇಲ್ಲಿ ಕಾಣಬಹುದು. ಪಾರ್ವತಿಯ ವಿಗ್ರಹಕ್ಕೆ ಬಂಗಾರದ ಕವಚವಿದ್ದರೆ ಇನ್ನಿತರ ಮೂರ್ತಿಗಳಿಗೆ ಬೆಳ್ಳಿಯ ಕವಚವಿರುತ್ತದೆ. ದೇವಾಲಯದ ಪರಿಸರದಲ್ಲಿ ನೂರಾರು ವರುಷಗಳ ಹಿಂದೆ ಬಿಡಿಸಲಾದ ರಾಮಾಯಣ, ಮಹಾಭಾರತ ಮೊದಲಾದ ಪೌರಾಣಿಕ ಚಿತ್ರಗಳು ಇಂದಿಗೂ ಅಚ್ಚಳಿಯದೆ ಉಳಿದು ಮೆರಗನ್ನು ಸೂಸುತ್ತಲಿವೆ. ಪ್ರದೋಷಕಾಲದಲ್ಲಿ ಮಹಾದೇವನು ನೃತ್ಯ ಮಾಡುತ್ತಿರುವುದನ್ನು ನೋಡಿ ಹರ್ಷಿತನಾಗಿ ಕುಳಿತ ವೃಷಭದೇವನ ವಿಗ್ರಹ ಬಹು ಮೋಹಕವಾಗಿ ತೋರುತ್ತದೆ.

ಭಾರ್ಗವರಾಮನು ಕೇರಳ ಪ್ರಾಂತದಲ್ಲಿ ನೂರೊಂದು ದೇವಾಲಯ ಗಳನ್ನು ನಿರ್ಮಿಸಿದನಂತೆ. ಆ ನೂರೊಂದರಲ್ಲಿ ಶ್ರೀ ವಡಕ್ಕುನಾಥಂ ದೇವಮಂದಿರವು ಅತ್ಯಂತ ಪ್ರಮುಖವಾದುದಾಗಿದೆ. ಈ ದೇವನ ಪೂಜಾವಿಧಾನವು ಬೆಳಗಿನ ಜಾವ ಮೂರು ಗಂಟೆಗೆ ಆರಂಭವಾದರೂ ಭಕ್ತರಿಗೆ ಬೆಳಗಿನ 4 ಗಂಟೆಯಿಂದ 11 ಗಂಟೆಯವರೆಗೆ, ಆನಂತರ ಸಾಯಂಕಾಲ 5 ಗಂಟೆಯಿಂದ ರಾತ್ರಿ 8.30ರವರೆಗೆ ದರ್ಶನ ಭಾಗ್ಯವು ಲಭಿಸುತ್ತದೆ.

ದೇವಾಲಯವನ್ನು ಪ್ರವೇಶಿಸುವಾಗ ಎಂಥವರೇ ಇರಲಿ, ಅವರು ತಮ್ಮ ಮೈಮೇಲಿನ ಷರಟನ್ನು ತೆಗೆದೇ ಒಳಗೆ ಪ್ರವೇಶ ಮಾಡಬೇಕೆಂಬ ನಿರ್ಬಂಧವಿದೆ. ನೂರೈವತ್ತು ವರುಷಗಳ ಹಿಂದೆ ಈ ದೇವಾಲಯದ ಜೀರ್ಣೋದ್ಧಾರ ಕಾರ್ಯವು ನಡೆಯಿತೆಂದು ತಿಳಿದು ಬರುತ್ತದೆ. ಇಲ್ಲಿರುವ ದೇವಾಲಯಗಳೆಲ್ಲ ವಿಶೇಷವಾಗಿ ಶಿರೋಭೂಷಣವೆನಿಸಬಹುದಾದ ವೇಟಾದ ರೀತಿಯಲ್ಲಿ ಕಾಣಸಿಗುತ್ತವೆ. ಶಿವ ದೇವಾಲಯದಲ್ಲಿ ಬಂಗಾರದ ತಗಡು ಹೊದಿಸಿರುವುದನ್ನು ಕಾಣಬಹುದಾಗಿದೆ. ಶಿವಲಿಂಗದ ಮೇಲೆ ಆರು ಕಿಲೋ ತೂಕದ ಬಂಗಾರದ ಕವಚ ಹಾಗೂ ಒಡವೆಗಳಿರುತ್ತವೆ ಅದೇ ರೀತಿ ಪಾರ್ವತಿ ದೇವಿಗೆ ಎಡು ಕಿಲೋ ತೂಕದ ಒಡವೆಗಳಿರುತ್ತವೆಂದು ಹೇಳುತ್ತಾರೆ.

ಈ ದೇವಾಲಯಕ್ಕೆ ನಾಲ್ಕು ಪ್ರಮುಖ ಬಾಗಿಲುಗಳಿವೆ. ಆದರೆ ದಕ್ಷಿಣದ ಬಾಗಿಲು ಮಾತ್ರ ಯಾವಾಗಲೂ ಮುಚ್ಚಿರುತ್ತದೆ. ಆ ಬಾಗಿಲನ್ನು ಕೇವಲ ತ್ರಿಚ್ಯೂರಿನಲ್ಲಿ ನಡೆಯುವ ಪೂನಮ್ ಎಂಬ ಉತ್ಸವ ಕಾಲದಲ್ಲಿ ಮಾತ್ರ ತೆಗೆಯುತ್ತಾರೆ. ಉತ್ತರ ಭಾಗದಲ್ಲಿ ವಿಶಾಲ ಕೆರೆ ಇದೆ. ಇಲ್ಲಿ ಆನೆಗಳಿಗೆಲ್ಲ ಸ್ನಾನ ಮಾಡಿಸುವ ಪದ್ಧತಿ ಇದೆ. ಹೀಗಾಗಿ ಪೂರ್ವ ಪಶ್ಚಿಮ ಬಾಗಿಲುಗಳು ಮಾತ್ರ ಮಹತ್ವದ ದ್ವಾರಗಳೆನಿಸಿವೆ. ಈ ಬಾಗಿಲುಗಳಿಗೆಲ್ಲ ಬಹು ಸೊಗಸಾದ ಕುಸುರಿನ ಕೆಲಸಮಾಡಲಾಗಿದೆ. ದೇವಾಲಯದ ಆವರಣದಲ್ಲಿ ಸಂಗೀತ, ಕಥಕ್ಕಳಿ ನೃತ್ಯ ಮೊದಲಾದ ಸಾಂಸ್ಕೃತಿಕ

ಕಾರ್ಯಕ್ರಮಗಳಿರುತ್ತವೆ. ಬೆಳಗಿನ 3.50 ರಿಂದ 6.30ರವರೆಗೆ, ನಂತರ ಮಧ್ಯಾಹ್ನ 10.15 ರಿಂದ 10.30, ಸಾಯಂಕಾಲ 7.15 ರಿಂದ 8.15ರವರೆಗೆ ವಡಕ್ಕುನಾಥಂ ದೇವಾಲಯದಲ್ಲಿ ಮಂಗಲ ಕಾರ್ಯಗಳು ನಡೆಯುತ್ತಲೇ ಇರುತ್ತವೆ. ಈ ದೇವಾಲಯದಲ್ಲಿ ಏಪ್ರಿಲ್ ತಿಂಗಳು ಕೊನೆಯ ಭಾಗದಲ್ಲಿ ನಡೆಸಲಾಗುವ ಪೂರಮ್ ಎಂಬ ಉತ್ಸವವು ಮಾತ್ರ ಅತ್ಯಂತ ಆಕರ್ಷಣೀಯವಾದುದಾಗಿರುತ್ತದೆ. ದೇಶ ವಿದೇಶಗಳಿಂದ ಈ ಉತ್ಸವವನ್ನು ವೀಕ್ಷಿಸಲು ತಂಡೋಪತಂಡವಾಗಿ ಪ್ರವಾಸಿಗರು ಬರುತ್ತಾರೆ.

# ಕೇರಳದ ಪೂನಮ್ ಉತ್ಸವ

ವನ್ಯ ಜೀವನದ ಹೆಮ್ಮೆಯ ಪ್ರಾಣಿಯಾದ ಆನೆಯು ಭಾರತೀಯರಿಗೆಲ್ಲ ಪೂಜನೀಯ ಜೀವಿ ಎಂದೆನಿಸಿಕೊಂಡಿದೆ. ಅದು ರಾಜ ವೈಭವದಿಂದ ದೇವ ಸೇವೆಯನ್ನೂ ಮಾಡುತ್ತದೆ. ಆನೆಯು ದೇವತ್ವದ ಮಹತಿಯೊಂದಿಗೆ ಮಾನವನ ಒಡನಾಡಿಯಾಗಿ ಆತನೊಂದಿಗೆ ಸ್ನೇಹ ಹವ್ಯಾಸಗಳಿಂದ ಆತ್ಮೀಯ ಸೇವಕನಾಗಿ ಕೆಲಸ ಮಾಡಿಕೊಂಡು ಬರುತ್ತಿರುವುದನ್ನು ಕಂಡಾಗ ಎಂಥವನಿಗೂ ಅಚ್ಚರಿಯೆನಿಸುವುದು ಸಹಜ.

ಗಜರಾಜನ ಮಾನವಂದನೆಯ ಮಹತ್ವನ್ನು ಕಣ್ಣಾರೆ ಕಂಡು ಆನಂದಿಸಬೇಕಾದಲ್ಲಿ ನಾವು ದಕ್ಷಿಣ ಭಾರತದ ತುದಿ ಅಂಚಿನಲ್ಲಿರುವ ಕೇರಳದ ತ್ರಿಚ್ಯೂರಿಗೆ ಭೇಟಿ ಕೊಡುವದು ಹಿತ. ಕೋಚಿನದ ಸತ್ಪನ್ ಧಮ್ಮಾರನ್ ಎಂಬ ದೊರೆಯು ಇನ್ನೂರು ವರುಷಗಳ ಹಿಂದೆ ಈ ಉತ್ಸವವನ್ನಾರಂಭಿಸಿದನೆಂದು ತಿಳಿದು ಬರುತ್ತದೆ. ಈ ಉತ್ಸವವು ಮಲೆಯಾಳದ ಪಂಚಾಂಗದಂತೆ ಮೇಡಮಲ್ ತಿಂಗಳಲ್ಲಿ ಅಂದರೆ ಏಪ್ರೀಲ್ 14 ರಿಂದ ಮೇ 14ರ ಮಧ್ಯಭಾಗದಲ್ಲಿ ಆಚರಿಸಲ್ಪಡುತ್ತದೆ. ಇಲ್ಲಿಯ ಪ್ರಸಿದ್ಧ ವಡಕ್ಕುನಾಥ್‌ಂ ದೇವಾಲಯವು 1500 ವರುಷಗಳಷ್ಟು ಪ್ರಾಚೀನತೆಯನ್ನು ಹೊಂದಿದೆ. ಉತ್ತರ ಕೇರಳದ ಮಧ್ಯದಲ್ಲಿ ಪೂನಮ್ ಉತ್ಸವವು ಬಹು ವೈಭವದಿಂದ ಆಚರಿಸಲಾಗುತ್ತದೆ. ಇದನ್ನು ತರುಣರ ಹಬ್ಬವೆಂದೇ ಭಾವಿಸುತ್ತಾರೆ.

ವಿಶ್ವದ ಆತ್ಮಾಕರ್ಷಕ ಉತ್ಸವವೆನಿಸಿದ ಪೂನಮ್ ಉತ್ಸವದಲ್ಲಿ ಪ್ರಧಾನ ಪಾತ್ರವು ಗಜರಾಜನದಾಗಿದೆ. ತ್ರಿಚ್ಯೂರಿನ 'ಸ್ವರಾಜ್ಯ ಕಾಂಡ'

ಎಂಬಲ್ಲಿ ನಡೆಯುವ ಈ ಉತ್ಸವವನ್ನು ನೋಡಿ ಆನಂದಿಸಲು ಸಾಗರೋಪರೀತಿಯಲ್ಲಿ ಜನರು ಬಂದು ಸೇರುತ್ತಾರೆ. ಆ ಸಂದರ್ಭದಲ್ಲಿ ಇಲ್ಲಿಯ ಸಣ್ಣಪುಟ್ಟ ಹೋಟೆಲಿನವರು ಒಂದಕ್ಕೆ ನಾಲ್ಕರಷ್ಟು ಹಣವನ್ನು ಪ್ರವಾಸಿಗರಿಂದ ಸಂಪಾದಿಸುವದುಂಟು. ಪೂನಮ್ ಉತ್ಸವ ನಡೆಯುವ ಕಾಲವು ಕೇವಲ ಮೂವತ್ತಾರು ಗಂಟೆಗಳು ಮಾತ್ರ. ಸ್ವರ್ಗಾನಂದವನ್ನೀಯು ವಂತಹ ಈ ಉತ್ಸವವು ಬಹು ಸ್ಪರ್ಧಾತ್ಮಕವಾಗಿ ವ್ಯವಸ್ಥಿತ ರೀತಿಯಲ್ಲಿ ನಡೆಯುವದನ್ನು ನೋಡುವದೇ ಒಂದು ಭಾಗ್ಯವೆನಿಸುತ್ತದೆ.

ಪೂನವ್ ಉತ್ಸವದಲ್ಲಿ ತ್ರಿಚ್ಚೂರಿನ ಅನೇಕ ಶಾಖೆಗಳು ಭಾಗವಹಿಸುವದುಂಟು. ಅವುಗಳಲ್ಲಿ ಎರಡು ಶಾಖೆಗಳು ಮಾತ್ರ ಪ್ರಮುಖವಾಗಿವೆ. ಮೊದಲನೆಯದು, ಪರಮೇಕ್ಕಾವು ಮಂದಿರದ ಶಾಖೆಯಾದರೆ ಎರಡನೆಯದು ಥಿರುವಂಬಾಡಿ ಮಂದಿರದ ಶಾಖೆಯಾಗಿದೆ. ಪೂರ್ವದ ಪರಮೇಕ್ಕಾವು ಮಂದಿರ ಹಾಗೂ ಉತ್ತರ ಭಾಗದಲ್ಲಿರುವ ಥಿರುವಂಬಾಡಿ ದೇವಾಲಯದವರು ತುಂಬ ಆಸಕ್ತಿಯಿಂದ ಈ ಉತ್ಸವದಲ್ಲಿ ಭಾಗಿಗಳಾಗುತ್ತಾರೆ.

ನೇತ್ರಾನಂದವನ್ನುಂಟು ಮಾಡುಪಂತಹ ಸಾಲಂಕೃತ ಹದಿನೈದು ಆನೆಗಳ ಸಮೂಹವು ಧೀರ ಗಂಭೀರವಾದ ನಡಿಗೆಯೊಂದಿಗೆ 12.30 ಗಂಟೆಗೆ ಪರಮೇಕ್ಕಾವು ಮಂದಿರದಿಂದ ಹೊರಬೀಳುತ್ತವೆ. ಪ್ರತಿಯೊಂದು ಆನೆಗಳ ಮೇಲೆ ವೆಲ್‌ವೇಟ್‌ದಿಂದ ರಚಿಸಲಾದ ಕೊಡೆಗಳಿರುತ್ತವೆ. ನವಿಲುಗರಿಯ ಸುಂದರವಾದ ಬೀಸಣಿಕೆಗಳಿರುತ್ತವೆ. ಆನೆಯ ಮುಂಭಾಗದ ಸೊಂಡಿಲಿನ ಮೇಲೆ ಇಳಿಬಿಡಲಾದ ಬಂಗಾರದಂತೆ ಹೊಳೆವ ಹಣೆಪಟ್ಟಿಯಂತೂ ನೋಡಲು ಬಹು ಆನಂದವಾಗುವದು. ಅವೆಲ್ಲವುಗಳನ್ನು ನೋಡುತ್ತಿದ್ದಂತೆ ನಾವು ಭೂಮಿಯ ಮೇಲಿದ್ದೇವೆಯೋ ಅಥವಾ ಇಂದ್ರಲೋಕದಲ್ಲಿರುವೆವೋ ಎಂಬ ಭಾವನೆ ಮೂಡುತ್ತದೆ. ಎರಡು ಭಾಗಗಳಲ್ಲಿ ಏಳೇಳು ಆನೆಗಳು ಸಾಗಿರುತ್ತವೆ. ಕೆಂಪು ಕೊಡೆಗಳು ಮಧ್ಯದಲ್ಲಿ ಹಸಿರು ಕೊಡೆಗಳು

ಕಾಣಬರುತ್ತವೆ. ಹೀಗೆ ಬೇರೆ ಬೇರೆ ಶಾಖೆಗಳಿಂದ ಸುಮಾರು ಸಾಲಂಕೃತ ಆನೆಗಳು ವಡಕ್ಕುನಾಥಂ ಮಂದಿರದತ್ತ ಮುಂದರಿಯುತ್ತವೆ.

ಇಲ್ಲಿರುವ ಭಗವತಿ ದೇವಿಗೆ ಮೊದಲನೇ ಸ್ಥಾನವಿದೆ. ಆ ದೇವಿಯ ಮುಂಭಾಗದಲ್ಲಿ ವಾದ್ಯ ವೃಂದದ ಮೇಳ ಸಮೂಹವೇ ಒಟ್ಟುಗೂಡಿರುತ್ತದೆ. ನೂರಾರು ವರುಷಗಳಷ್ಟು ಹಿರಿದಾದ ಒಂದು ಮರವು ವಡಕ್ಕುನಾಥಂ ಮಂದಿರದ ಪರಿಸರದಲ್ಲಿದೆ. ಅದನ್ನು ಎಲಂಜಿ ವೃಕ್ಷವೆಂದು ಕರೆಯುತ್ತಾರೆ. ಉತ್ತರ ಭಾಗದಲ್ಲಿ ಥಿರುವಂಬಾಡಿ ದೇವಮಂದಿರದ ಸಮೀಪದಲ್ಲಿ ದುರ್ಗಾ ಮಾತೆಯ ಮಂದಿರವಿದೆ. ಅಲ್ಲಿಂದಲೂ ಸಹ ಒಂದು ಶಾಖೆಯು ಹೊರಡುತ್ತದೆ. ಹೊರಡುವಾಗ ಚಿಕ್ಕದಾಗಿ ತೋರುವ ಉತ್ಸವವು ಮುಂದರಿದಂತೆಲ್ಲಾ ಬೃಹದಾಕಾರದ ರೂಪವನ್ನೇ ತಾಳುತ್ತದೆ. ಎಲ್ಲ ಭಾಗಗಲಿಂದ ಬಂದ ಶಾಖೆಗಳು ಸ್ವರಾಜ್ಯ ವೃತ್ತದಲ್ಲಿ ಮಿಳಿತವಾಗುತ್ತವೆ. ಇದೇ ಪೂನಮ್ ಉತ್ಸವದ ಪರಮೋಚ್ಚ ಭಾಗವೆನಿಸುತ್ತದೆ.

ವಡಕ್ಕುನಾಥಂ ಮಂದಿರದ ದಕ್ಷಿಣ ಭಾಗವನ್ನೆಲ್ಲ ಈ ಉತ್ಸವಕ್ಕಾಗಿಯೇ ಮೀಸಲಿರಿಸಲಾಗಿದೆ. ಈ ದಕ್ಷಿಣ ಭಾಗದಿಂದಲೂ ಹದಿನೈದು ಆನೆಗಳು ಹೊರಬೀಳುತ್ತವೆ. ಉತ್ತರ ಭಾಗದಿಂದಲೂ ಅಷ್ಟೇ ಸಂಖ್ಯೆಯ ಆನೆಗಳು ಬರುತ್ತವೆ. ಈ ಎರಡೂ ಶಾಖೆಗಳು ನಿರ್ದಿಷ್ಟವಾದ ಸ್ಥಳದಲ್ಲಿ ಬಂದು ನಿಲ್ಲುತ್ತವೆ. ಸುಮಾರು 4.30ರ ಸಾಯಂಕಾಲ ಸಮಯದಲ್ಲಿ ವಿವಿಧ ಶಾಖೆಗಳವರು ತಮ್ಮ ತಮ್ಮಲ್ಲಿ ತಾವು ಹಿಡಿದುಕೊಂಡು ಬಂದ ಬಣ್ಣ ಬಣ್ಣದ ಕೊಡೆಗಳನ್ನು ಅದಲು ಬದಲು ಮಾಡುವ ದೃಶ್ಯವಂತೂ ನೇತ್ರಾನಂದವನ್ನುಂಟು ಮಾಡುತ್ತದೆ. ಇದನ್ನು 'ಧೋಕೋಟರಾಕ್ಕಮ್'' ಎಂದು ಕರೆಯುತ್ತಾರೆ. ಪ್ರತಿಯೊಂದು ಆನೆಯ ಮೇಲೆ ಮಹಂತನಿರುತ್ತಾನೆ. ಕೊಡೆಯನ್ನು ಮಾಹುತನೇ ಹಿಡಿದುಕೊಂಡಿರುತ್ತಾನೆ. ಪ್ರತಿಯೊಂದು ಶಾಖೆಯವರು ಬೇರೆ ಬೇರೆ ಬಣ್ಣಗಳ ಕೊಡೆಗಳನ್ನು ತಂದಿರುತ್ತಾರೆ. ಈ ಸಂದರ್ಭಕ್ಕೆ ತಕ್ಕಂತೆ ಸಮೂಹ

ವಾದ್ಯಗಳ ಮೇಳ ಧ್ವನಿಯು ಪ್ರವಾಸಿಗರ ಮನವನ್ನು ಪುಳಕಗೊಳ್ಳುವಂತೆ ಮಾಡುತ್ತದೆ. ಅದೆಲ್ಲ ನೋಡುತ್ತಿದ್ದಾಗ ಬಿಸಿಲಿನ ತಾಪದ ಅರಿವಾಗುವುದೇ ಇಲ್ಲ.

ಕೊಡೆಗಳ ಅದಲು ಬದಲು ಮಾಡಿಕೊಳ್ಳುವ ಆಟದಲ್ಲಿ ಯಾರು ಗೆದ್ದರು, ಸೋತವರಾರು ಎಂಬುದೇ ಗೊತ್ತಾಗುವದಿಲ್ಲ. ಸಾಯಂಕಾಲ 7.30ರ ಸುಮಾರಿನಲ್ಲಿ ಪರಮೇಕ್ಕಾವು ಮಂದಿರದ ಶಾಖೆಯವರು ಪುನಃ ಮಂದಿರದತ್ತ ಹೊರಡುತ್ತಾರೆ. ರಾತ್ರಿ ಹನ್ನೊಂದು ಗಂಟೆಯ ಸುಮಾರಿನಲ್ಲಿ ದೀವಟಿಗೆಗಳ ಬೆಳಕಿನಲ್ಲಿ ಗಜರಾಜನ ಮೆರವಣಿಗೆ ಸಾಗುತ್ತದೆ. ವಾದ್ಯ ವೈಭವದೊಂದಿಗೆ ಪುನಃ ಸಾಲಂಕೃತ ಮಂಟಪಕ್ಕೆ ಬರುತ್ತಾರೆ. ಒಂದು ಬದಿಯಲ್ಲಿ ಥಿರುವಂಬಾಡಿ ಶಾಖೆಯವರಿದ್ದರೆ ಇನ್ನೊಂದು ಭಾಗದಲ್ಲಿ ಪರಮೇಕ್ಕಾವು ಶಾಖೆಯವರು ನಿಂತಿರುತ್ತಾರೆ. ಆಗ ನಾನಾ ತರಹದ ಮದ್ದುಗಳನ್ನು ಸುಡಲಾಗುತ್ತದೆ. ಆಕಾಶದಲ್ಲೆಲ್ಲಾ ಬಣ್ಣ ಬಣ್ಣದ ಚುಕ್ಕೆಗಳು ಹೂವರಳಿದಂತೆ ಭಾಸವಾಗುತ್ತದೆ. ಈ ಕಾರ್ಯಕ್ರಮವು ಮಧ್ಯರಾತ್ರಿಯವರೆಗೆ ಸಾಗಿರುತ್ತದೆ. ಈ ಕಾರ್ಯಕ್ರಮದ ನಂತರ ಪ್ರತಿಯೊಂದು ಶಾಖೆಯು ಸ್ವಸ್ಥಾನಕ್ಕೆ ಹೊರಡುತ್ತದೆ. ಹೀಗೆ ಈ ಉತ್ಸವವು ಸುಮಾರು ಮೂವತ್ತಾರು ಗಂಟೆಗಳವರೆಗೆ ಸಾಗುವ ಉತ್ಸವವಾಗಿದೆ. ದೇವಾಲಯಗಳಲ್ಲಿ ಪ್ರಸಾದದ ವಿನಿಯೋಗವಾಗುತ್ತದೆ. ದೇವಾಲಯಗಳ ಮುಂಭಾಗವೆಲ್ಲ ನಾನಾ ತರಹದ ತಳಿರು ತೋರಣಗಳಿಂದ ಶೋಭಾಯಮಾನವಾಗಿ ತೋರುವಂತೆ ಮಾಡಿರುತ್ತಾರೆ. ನಸುಕಿನ ಜಾವದಲ್ಲಿ ಸುಶ್ರಾವ್ಯವಾದ ವೇದಧ್ವನಿಯು ತರಂಗರೂಪದಲ್ಲಿ ಕರ್ಣಾನಂದವೀಯುತ್ತವೆ. ಈ ಉತ್ಸವದಲ್ಲಿ ಭಾಗವಹಿಸುವ ಶಾಖೆಯವರು ಪ್ರತಿವರುಷ ಇಪ್ಪತ್ತರಿಂದ ಇಪ್ಪತ್ತೈದು ಲಕ್ಷದಷ್ಟು ಹಣವನ್ನು ಖರ್ಚು ಮಾಡುತ್ತಾರೆಂದು ಹೇಳುತ್ತಾರೆ. ಭಾರತದ ನಾನಾ ಭಾಗಗಳಿಂದ ಈ ಉತ್ಸವಕ್ಕಾಗಿ ಭಕ್ತರು ಹಣ ಕಳುಹಿಸುವ ಸಂಪ್ರದಾಯವಿದೆ.

ಪೂನವ್ ಉತ್ಸವವು ಮುಗಿದ ನಂತರ ಸಿ.ಎಮ್.ಎಸ್.

ಹೈಸ್ಕೂಲಿನಲ್ಲಿ ಆ ವರುಷದ ಉತ್ಸವ ಕಾಲದಲ್ಲಿ ಬಳಸಲಾದ ಬಹುಮೂಲ್ಯ ಸಾಧನ ಸಾಮಗ್ರಿಗಳ ಪ್ರದರ್ಶನವನ್ನೇರ್ಪಡಿಸಿರುತ್ತಾರೆ. ಆನೆಯ ಅಲಂಕಾರಕ್ಕಾಗಿ ಬಳಸಲಾದ ವೈವಿಧ್ಯಮಯವಾದ ಸಾಮಗ್ರಿಗಳನ್ನು ಅಲ್ಲಿ ನೋಡಬಹುದಾಗಿದೆ.

ಪೂರಮ್ ಉತ್ಸವದ ಸಂದರ್ಭದಲ್ಲಿ ಕೊಡೆಗಳ ಅದಲು ಬದಲಿನ ಆಟವಂತೂ ಬಹು ಮೋಹಕವಾಗಿರುತ್ತದೆ. ಭಾರತದ ಇನ್ನಾವ ಭಾಗಗಳಲ್ಲಿಯೂ ಉತ್ಸವ ಕಾಲದಲ್ಲಿ ಇಷ್ಟೊಂದು ಆನೆಗಳನ್ನು ಬಳಸುವ ಪದ್ಧತಿಯು ಕಾಣಬರುವುದಿಲ್ಲ. ದಕ್ಷಿಣ ಭಾರತದ ಅಭೂತಪೂರ್ವ ಉತ್ಸವವು ಪೂರಮ್ ಎಂದಾಗಿದೆ.

# ವೀರ ಪ್ರತಾಪಿ ಸಂಕಣ್ಣ ನಾಯಕ ( ಕೆಳದಿ )

ನಮ್ಮ ನಾಡು ಎಪ್ಪತ್ತೆರಡು ಸಾವಿರ ಚದುರ ಮೈಲು ವಿಸ್ತಾರವುಳ್ಳದ್ದು. ನಡುಂಬೈತಿನಿಸಂತೆ ಈ ನಾಡಿನಲ್ಲಿ ತುಂಗಭದ್ರೆ ಹರಿಯುತ್ತಾಳೆ. ವಿಜಯನಗರದ ಸಾಮಂತ ರಾಜ್ಯವಾಗಿ ಕೆಳದಿಯ ರಾಜ್ಯವು ಬೆಳೆಯಿತು. ಕ್ರಿ.ಶ. 1511 ರಿಂದ 1763ರವರೆಗೆ ಚಿಕ್ಕಮಂಗಳೂರು, ಮಂಗಳೂರು, ಹಾಸನ, ಕಾರವಾರದ ಕೆಲವು ಭಾಗಗಳು ಈ ರಾಜ್ಯಕ್ಕೆ ಸೇರಿಕೊಂಡಿದ್ದವು. ಬಸಪ್ಪ ನಾಯಕ, ಚೌಡಪ್ಪ ನಾಯಕ ಕ್ರಿ.ಶ. 1500 ರಿಂದ 1514, ಸದಾಶಿವ ನಾಯಕ 1514ರಿಂದ 1546, ಸಂಕಣ್ಣ ನಾಯಕ 1514 ರಿಂದ 1546. ಈ ರಾಜ್ಯದ ಇತಿಹಾಸವನ್ನು ತಿಳಿಸಿ ಹೇಳುವುದರಲ್ಲಿ ಲಿಂಗಣ್ಣ ಕವಿಯ ಪಾತ್ರ ಬಹು ಮಹತ್ವದ್ದು. ಆತನು ಇ.ಸ. 1763ರಲ್ಲಿ ಬಹು ಸೊಗಸಾದ ಕೆಳದಿಯ ನೃಪವಿಜಯ ಎಂಬ ಕಾವ್ಯವನ್ನಿತ್ತು ನಮಗೆ ಉಪಕಾರ ಮಾಡಿದ್ದಾನೆ.

ಇ.ಸ. 1546ರಲ್ಲಿ ಸಂಕಣ್ಣ ನಾಯಕನು ಪಟ್ಟಕ್ಕೆ ಬಂದನು. ವಿಜಯನಗರದವರ ಪರವಾಗಿ ಆವನು ಸಾಕಷ್ಟು ಯುದ್ಧಗಳಲ್ಲಿ ಭಾಗವಹಿಸಿದ. ಅದಾವ ಕಾರಣದಿಂದಲೋ ಮುಂದೆ ಆತನಿಗೆ ಭಾರತ ತೀರ್ಥಯಾತ್ರೆಗಳ ಸಂದರ್ಶನದ ಅಭಿಲಾಷೆ ಮೂಡಿತು. ತನ್ನ ಅಂತರಂಗದ ಆತ್ಮೀಯರೊಂದಿಗೆ ಪ್ರವಾಸವನ್ನಾರಂಭಿಸಿದನು. ಆತನ ಪ್ರವಾಸದ ಕಥನವೇ ಲಿಂಗಣ್ಣ ಕವಿಯ ಕೆಳದಿಯ ನೃಪವಿಜಯ ಎಂಬ ಕಾವ್ಯ ರೂಪದಲ್ಲಿ ಹೊರಹೊಮ್ಮಿ ಬಂದಿತು.

ಪ್ರವಾಸವನ್ನಾರಂಭಿಸುವ ಮುನ್ನ ತನ್ನ ತಮ್ಮನ ಮಕ್ಕಳಾಗಿದ್ದ ಚಿಕ್ಕ ಸಂಕಣ್ಣ ಹಾಗೂ ವೆಂಕಟಪ್ಪ ನಾಯಕರಿಗೆ ರಾಜ್ಯಭಾರವನ್ನು ಒಪ್ಪಿಸಿದನು.

ಸ್ವತಃ ವೀರಶೈವ ಸಂಪ್ರದಾಯವಾದಿಯಾದ ಆತನು ಜಂಗಮ ವೇಷದಿಂದಲೇ ತನ್ನ ಪ್ರವಾಸವನ್ನಾರಂಭಿಸಿದನು. ಮೊದಲು ದಕ್ಷಿಣ ಭಾರತದ ಕಂಚಿ, ಚಿದಂಬರಂ, ರಾಮೇಶ್ವರ ಮೊದಲಾದ ಪುಣ್ಯಕ್ಷೇತ್ರಗಳ ದರ್ಶನ ಮಾಡಿಕೊಂಡು ವಿಜಾಪುರ ಹಾಗೂ ಗೋವಳಕೊಂಡ ರಾಜ್ಯಗಳ ಮಾರ್ಗವಾಗಿ ಉತ್ತರ ಭಾರತದತ್ತ ಆತನ ಪ್ರಯಾಣವು ಆರಂಭವಾಯಿತು.

ಕೆಳದಿಯ ನೃಪವಿಜಯದಲ್ಲಿ ಲಿಂಗಣ್ಣ ಕವಿಯು ದಿಲ್ಲಿಯ ವಿಚಾರವನ್ನು ಉಲ್ಲೇಖಿಸಿದ್ದಾನೆ. ಆದರೆ ಅದು ಸರಿಯಲ್ಲವೆಂದು ನನ್ನ ಗುರುಗಳಾಗಿದ್ದ ಡಾ : ಸೇತು ಮಾಧವರಾವ್ ಪಗಡಿಯವರು ನಿರ್ಧರಿಸಿ ದಿಲ್ಲಿಯ ಬದಲಾಗಿ ಸಾಕ್ಷಿಸಮೇತವಾಗಿ ಅವರು ಅಹಮ್ಮದನಗರವನ್ನು ಸೂಚಿಸಿದ್ದಾರೆ. ಅಹಮ್ಮದನಗರದಲ್ಲಿ ಬುರ್ಹಾಣ ನಿಜಾಮಶಹನು ರಾಜ್ಯವಾಳುತ್ತಲಿದ್ದ. ಆತನಿಗೆ ದ್ವಂದ್ವಯುದ್ಧದಲ್ಲಿ ಹೆಚ್ಚಿನ ಅಭಿರುಚಿ ಇತ್ತು. ಸಂಕಣ್ಣ ನಾಯಕನು ಅಹಮ್ಮದನಗರದ ಕೋಟೆಯನ್ನು ಪ್ರವೇಶ ಮಾಡುವಾಗ ಹೆಬ್ಬಾಗಿಲಿನಲ್ಲಿ ಒಂದು ಖಡ್ಗವನ್ನು ತೂಗು ಬಿಡಲಾಗಿದ್ದು, ಆ ಖಡ್ಗದ ಮೇಲೆ ಉರ್ದುವಿನಲ್ಲಿದ್ದ ಲೇಖನವನ್ನು ಕುರಿತು ಸಂಕಣ್ಣನು ಕೊತವಾಲನನ್ನು ವಿಚಾರಿಸಿದನು.

"ಈ ರಾಜ್ಯದ ಮಹಾಮಂತ್ರಿ ಅಂಕುಶ ಖಾನನು ಯಾರಾದರೂ ದ್ವಂದ್ವ ಯುದ್ಧದಲ್ಲಿ ನನ್ನೊಂದಿಗೆ ಹೋರಾಡಲು ಸಿದ್ಧರಿದ್ದಲ್ಲಿ ಈ ಖಡ್ಗವನ್ನು ಕೆಳಗಿಳಿಸಿ, ನನ್ನೊಂದಿಗೆ ಹೋರಾಡಲು ಸಿದ್ಧರಾಗಬಹುದು. ಅಂಥವರ ಗಂಡಸುತನಕ್ಕೆ ಇದು ಆಹ್ವಾನವಾಗಿದೆ" ಎಂಬುದಾಗಿ ತಿಳಿಸಿದರು. ಆಗ ಸಂಕಣ್ಣ ನಾಯಕನು ನಕ್ಕು, "ಮೊದಲು ಆ ಖಡ್ಗವನ್ನು ಕೆಳಗಿಳಿಸಿರಿ. ಅಂಕುಶ ಖಾನನೊಂದಿಗೆ ಹೋರಾಡಲು ನಾವು ಸಿದ್ಧರಿರುವುದಾಗಿ ಹೇಳಿರಿ. ಮೊದಲು ಬಾದಶಹ ಬುರ್ಹಾಣ ನಿಜಾಮ ಶಹರಿಗೆ ಈ ಮಾತನ್ನು ಹೇಳಿ ಕಳುಹಿಸಿರಿ"

"ಮಹಾಸ್ವಾಮಿ, ತಾವು ಯಾರು? ತಮಗೇಕೆ ಈ ಸಾಹಸದ ಮಾತು?

ಅಂಕುಶ ಖಾನರು ಸಾಮಾನ್ಯರಲ್ಲ. ಪ್ರಾಣದ ಮೇಲೆ ಆಶೆ ಇದ್ದಲ್ಲಿ ಈ ಸಾಹಸಕ್ಕೆ ಕೈಹಾಕಬೇಡಿರಿ'' ಎಂದು ಕೊತವಾಲ ಬಿನ್ನವಿಸಿದನು.

''ನಾವು ಯಾರಾದರೇನಂತೆ, ನಿಮ್ಮ ಅಂಕುಶಖಾನರೊಡ್ಡಿದ ಶರತ್ತುಗಳಿಗೆ ಸಿದ್ಧರಾಗಿಯೇ ಬಂದಿದ್ದೇವೆ. ಭಯಪಡಬೇಡಿರಿ. ಮೊದಲು ನಿಮ್ಮ ಬಾದಶಹರಿಗೆ ನಮ್ಮ ಈ ವಿಚಾರವನ್ನು ತಿಳಿಸಿರಿ'' ಎಂದು ಹೇಳಿಕಳುಹಿಸಿದನು.

ಬಾದಶಹನ ಸನ್ಮುಖದಲ್ಲಿ ಆತನನ್ನು ಕರೆತಂದು ನಿಲ್ಲಿಸಿದಾಗ ಆತನ ಮುಖದಲ್ಲಿರುವ ತೇಜಸ್ಸು, ವಾಕ್ಚಾತುರ್ಯ, ನಿರ್ಭಯದ ನೋಟಗಳನ್ನು ಕಂಡು ಬಾದಶಹನಿಗೆ ಬಹು ಆಶ್ಚರ್ಯವಾಯಿತು. ಬಹುದಿನಗಳಿಂದ ಕೊಬ್ಬಿದ್ದ ಅಂಕಶ ಖಾನನನ್ನು ಎದುರಿಸುವ ಭೂಪನನ್ನು ಕಂಡು ಆತನು ಮನದಲ್ಲಿಯೇ ಸಂತೋಷಪಟ್ಟನು. ತಕ್ಷಣವೇ ದ್ವಂದ್ವ ಯುದ್ಧದ ಸಿದ್ಧತೆಗೆ ಆಜ್ಞೆ ಮಾಡಿದನು. ಅಷ್ಟೇ ಅಲ್ಲದೇ ಅತಿಥಿಗಳ ಬಿಡಾರ ಹಾಗೂ ಊಟೋಪಚಾರಗಳಿಗೆಲ್ಲ ಸರಿಯಾದ ವ್ಯವಸ್ಥೆಯಾಗುವಂತೆ ಸೇವಕರಿಗೆ ಸೂಚನೆ ಮಾಡಿದನು.

ದಿನನಿತ್ಯದ ಪೂಜಾವಿಧಾನಗಳನ್ನು ಮುಗಿಸಿ ಹಣೆಯಲ್ಲಿ ಶ್ರೀಗಂಧ ಲೇಪಿತನಾದ ಸಂಕಣ್ಣ ನಾಯಕನು ದರ್ಬಾರಿನಲ್ಲಿ ಹಾಜರಾದಾಗ ವಜೀರ ಅಂಕುಶ ಖಾನನು ನೀನಾರೆಂಬುದು ನಮಗೆ ತಿಳಿಯದು. ವೃಥಾ ಪ್ರಾಣ ಕಳೆದುಕೊಳ್ಳಬೇಡ. ವಿನಮ್ರವಾಗಿ ನಡೆದುಕೊಂಡಲ್ಲಿ ಬಾದಶಹರಿಂದ ಬಹುಮಾನ ಕೊಡಿಸುವುದಾಗಿ ಸಂಕಣ್ಣ ನಾಯಕನಿಗೆ ಹೇಳಿದ. ಸಂಕಣ್ಣನು ಮಾತ್ರ ಆತನಿಗೆ ದ್ವಂದ್ವ ಯುದ್ಧಕ್ಕೆ ಸಿದ್ಧನಾಗುವಂತೆ ಉತ್ತರಿಸಿದ.

ಪ್ರಜೆಗಳು ಆ ದ್ವಂದ್ವ ಯುದ್ಧವನ್ನು ವೀಕ್ಷಿಸಲು ತಂಡೋಪತಂಡವಾಗಿ ಬಂದು ಸೇರಿದರು. ಸಂಕಣ್ಣನ ಕೈಯಲ್ಲಿ ಆಯುಧವಿಲ್ಲದುದನ್ನು ಕಂಡ ಮಿರ್ಹಾಣ ನಿಜಾಮ ಶಹನು ಆತನಿಗೆ ತೀಕ್ಷ್ಣವಾದ ಖಡ್ಗವನ್ನು ಒಪ್ಪಿಸುವಂತೆ ಹೇಳಿದನು. ಕೊಟ್ಟ ಖಡ್ಗವು ಎರಡು ಸಲ ತಿರುಗಿಸುವುದಲ್ಲಿಯೇ ತುಂಡಾಗಿ

ಹೋಯಿತು. ಹೀಗೆ ಒಂದಲ್ಲ, ಎರಡಲ್ಲ ಹನ್ನೆರಡು ಖಡ್ಗಗಳು ತುಂಡಾಗಿ ಬಿದ್ದಾಗ ಬಾದಶಹನು ತನ್ನ ಸ್ವಂತದ ಖಡ್ಗವನ್ನೇ ಕೊಡಲು ಮುಂದಾದುದನ್ನು ಕಂಡ ಸಂಕಣ್ಣ ನಾಯಕನು "ಬೇಡ, ನಿಮ್ಮ ಆ ಖಡ್ಗವನ್ನು ನಾನು ಬಳಸಲಾರೆ. ಅದು ಎಷ್ಟಾದರೂ ರಾಜಖಡ್ಗವೆನಿಸುತ್ತದೆ. ಅದರ ಮರ್ಯಾದೆ ಅದಕ್ಕಿದ್ದೇ ಇದೆ." ಎಂದು ಹೇಳಿ ತಾನು ಸಂಗಡ ತೆಗೆದುಕೊಂಡು ಬಂದಿದ್ದ "ನಾಗಮುರಿ" ಖಡ್ಗವನ್ನು ಹೊರತೆಗೆದನು.

ಈ ದ್ವಂದ್ವ ಯುದ್ಧವನ್ನು ಲಿಂಗಣ್ಣ ಕವಿ ಹೇಗೆ ವರ್ಣಿಸಿರುವನೆಂದು ಹೇಳುವುದಕ್ಕಿಂತ ಆ ಗ್ರಂಥದ ಅಭ್ಯಾಸ ಮಾಡುವದೇ ಹಿತ. ಅದರೂ ಸ್ವಲ್ಪದರಲ್ಲಿ ಆತನ ವರ್ಣನೆಯನ್ನಿಲ್ಲಿ ಒದಗಿಸಲಾಗಿರುವದು.

"ಕ್ರೋಧಾನ್ವಿತ ವರಾಹಗಳಂತೆ, ಕಡುಕೋಪಗೊಂಡು ಬುಸುಗುಟ್ಟುವ ಸರ್ಪಗಳಂತೆ, ಕೋಪೋದ್ರಿಕ್ತ ಸಿಂಹಗಳಂತೆ, ಮದವೇರಿದ ಆನೆಗಳಂತೆ, ಅವರಿಬ್ಬರ ಖಡ್ಗಗಳ ಖಣಾಖಣಿತ ಶಬ್ದಗಳು ಸಿಡಿಲಿನಂತೆ ಕೇಳಬರುತ್ತಿದ್ದವು. ಖಡ್ಗಗಳ ತಾಕಲಾಟದಿಂದ ಹಾರಿದ ಕಿಡಿಗಳು ಮಿಂಚಿನಂತೆ ಕಂಗೊಳಿಸುತ್ತಿದ್ದವು. ಹೀಗೆ ದಿನವೆಲ್ಲ ಹೋರಾಟವು ಸಾಗುತ್ತ ಕೊನೆಗೆ ಖಡ್ಗ ತ್ಯಜಿಸಿ ಮಲ್ಲಯುದ್ಧಕ್ಕಿಳಿದಾಗಲೂ ಸಹ ಅದರಲ್ಲಿ ಯಾರೂ ಗೆಲಿಯುವ ಲಕ್ಷಣಗಳು ಕಾಣಲಿಲ್ಲ. ಅದರಿಂದಾಗಿ ಪುನಃ ಖಡ್ಗಯುದ್ಧವನ್ನು ಆರಂಭಿಸಿದರು. ಒಂದು ಸಲ ಅಂಕುಶ ಖಾನನು ತನ್ನೆಲ್ಲ ಶಕ್ತಿಯನ್ನು ಬಳಸಿ ನಾಯಕನ ಮೇಲೆ ಪ್ರಹಾರ ಮಾಡಲು ಯತ್ನಿಸಿದನು. ಆಗ ಚಾಣಾಕ್ಷನಾದ ಸಂಕಣ್ಣನು ಆ ಹೊಡೆತದಿಂದ ಪಾರಾದನಲ್ಲದೆ ತನ್ನ ನಾಗಮುರಿ ಖಡ್ಗದಿಂದ ಖಾನನ ದೇಹದ ಮೇಲೆ ಪ್ರಹಾರ ಮಾಡಿದನು. ಯುದ್ಧವನ್ನು ನಿಲ್ಲಿಸಿದನು. ಅದನ್ನು ಕಂಡ ಖರ್ಹಾಣ ನಿಜಾಮ ಶಹನು,

"ಯಾಕೆ ಮಧ್ಯದಲ್ಲಿಯೇ ನಿಲ್ಲಿಸಿದಿರಲ್ಲ, ಕಾರಣವೇನು?" ಎಂದು ಪ್ರಶ್ನೆ ಮಾಡಿದಾಗ ಸಂಕಣ್ಣನು ಮೃತದೇಹದೊಂದಿಗೆ ಯಾರಾದರೂ ಯುದ್ಧ ಮಾಡುತ್ತಾರೆಯೇ ಎಂದು ಹೇಳಿದಾಗ ಬಾದಶಹನಿಗೆ ಆತನ ಮಾತಿಲ್ಲಿ

ನಂಜಿಕೆಯು ಬರಲಿಲ್ಲ. ಅಂಕುಶ ಖಾನನು ನಿಂತಲ್ಲಿಯೇ ನಿಂತಿರುವದೇ ಆತನ ಈ ಸಂಶಯಕ್ಕೆ ಕಾರಣವಾಗಿತ್ತು. ಆಗ ಸಂಕಣ್ಣ ನಾಯಕನು ನಾಗಮುರಿ ಖಡ್ಗದಿಂದ ಆತನ ಎದೆಗೆ ತಿವಿದಾಗ ಕಡಿದ ಮರದಂತೆ ಖಾನನು ನೆಲಕ್ಕುರುಳಿದನು. ಅದನ್ನು ಕಂಡ ಬಾದಶಹನು ತಬ್ಬಿಬ್ಬಾಗಿ ಹೋದನು. ತಕ್ಷಣವೇ ಯುದ್ಧ ಭೂಮಿಯಿಂದ ಸನ್ಮಾನಪೂರ್ವಕ ಆತನನ್ನು ಕರೆಸಿಕೊಂಡು ಆದರದಿಂದ "ನೀವು ಯಾರು? ಇಲ್ಲಿಗೇಕೆ ಬಂದಿರಿ?" ಎಂದೆಲ್ಲ ವಿಚಾರ ಮಾಡಿದಾಗ ಸಂಕಣ್ಣ ನಾಯಕನು ಕನ್ನಡ ನಾಡಿನ ಕೆಳದಿಯ ದೊರೆಯಾದ ತಾನು ತೀರ್ಥಯಾತ್ರೆಗೆ ಹೊರಟಿರುವ ಸಮಾಚಾರವನ್ನು ತಿಳಿಸಿದನು. ಸಂತೋಷಭರಿತನಾದ ಬಾದಶಹನು ಕನ್ನಡ ನಾಡಿನ ರಾಜಮನೆತನದ ವೀರಾಧಿವೀರನನ್ನು ಸತ್ಕರಿಸುವಂತೆ ಅಪ್ಪಣೆ ಮಾಡಿದಾಗ, ಸಂಕಣ್ಣ ನಾಯಕನು "ನಾನು ಕುರುಕ್ಷೇತ್ರ, ಗಯಾ, ಪ್ರಯಾಗಗಳಿಗೆ ಹೋಗಿ, ಕಾಶೀ ಕ್ಷೇತ್ರದಲ್ಲಿ ಮಠವನ್ನು ನಿರ್ಮಿಸುವ ವಿಚಾರ ಮಾಡಿದ್ದೇನೆ" ಎಂದು ಹೇಳಿದಾಗ ಮಿರ್ಜಾಣ ನಿಜಾಮು ಶಹನು ಸಂಕಣ್ಣನಿಗೆ ಧರ್ಮಕಾರ್ಯಕ್ಕಾಗಿ ಹನ್ನೆರಡು ಸಾವಿರ ಹೊನ್ನುಗಳನ್ನಿತ್ತನಲ್ಲದೆ, ಆತನ ಸಂಗಡ ಮೃಗಾವಲಿನ ಸೇವಕರನ್ನು ಕಳಿಸಿಕೊಟ್ಟನು.

ಸಂಕಣ್ಣನು ಕಾಶೀ ಕ್ಷೇತ್ರದಲ್ಲಿ ದಿವ್ಯವಾದ ಮಠವನ್ನು ಕಟ್ಟಿಸಿದನಲ್ಲದೆ, ಅದಕ್ಕೆ ಅನೇಕ ರೀತಿಯ ಉಂಬಳಿಯ ವ್ಯವಸ್ಥೆ ಮಾಡಿದನು. (ಇಂದಿಗೂ ಕಾಶಿಯಲ್ಲಿ ಆ ಮಠವನ್ನು ನಾವು ನೋಡಬಹುದು. ಅದನ್ನು ವೀರಶೈವರು ಕಾಶೀಪೀಠವೆಂದು ಗೌರವಿಸುವದುಂಟು). ಕಾಶಿಯಲ್ಲಿ ಮನಸೋಕ್ತ ದಾನ ಧರ್ಮಾದಿಗಳನ್ನು ಮಾಡಿ ದಕ್ಷಿಣದ ಕಾಶಿ ಎಂದೆನಿಸಿಕೊಂಡಿದ್ದ ದೊಡ್ಡ ವಿದ್ಯಾಪೀಠವಾಗಿದ್ದ ಗೋದಾವರಿ ತೀರದ ಪೈಠಣಕ್ಕೆ ಬಂದು ತಲುಪಿದನು. ಆಗ ಒಂದು ದಿನ ನಸುಕಿನ ಜಾವದಲ್ಲಿ ಮೂವತ್ತೆರಡು ಭುಜಗಳಿಂದ ಕೂಡಿದ ಅಘೋರೇಶ್ವರ ಸ್ವಾಮಿಯ ದರ್ಶನವಾಗಿ ತಾನು ಕೆರೆಯ ದಂಡೆಯಲ್ಲಿರುವುದಾಗಿ ಸೂಚಿಸಿ ತನ್ನನ್ನು ಕರೆದುಕೊಂಡು ಹೋಗಿ ನಿನ್ನ ರಾಜ್ಯದಲ್ಲಿ ಪ್ರತಿಷ್ಠಾಪನೆ ಮಾಡೆಂದು ಸೂಚನೆಯಾಯಿತು ಮರುದಿನ ಸ್ವಪ್ನ

ಸೂಚಿತ ಸ್ಥಳಕ್ಕೆ ಹೋದಾಗ ಸ್ವಾಮಿಯನ್ನು ಕಂಡು ಹರ್ಷಭರಿತನಾದ ಸಂಕಣ್ಣ ನಾಯಕನು ಆ ದೇವನನ್ನು ಕರೆತಂದು ಇಕ್ಕೇರಿಯಲ್ಲಿ ಬಹು ದೊಡ್ಡ ದೇವಾಲಯ ಕಟ್ಟಿಸಿ ಅಲ್ಲಿಯೇ ಆ ದೇವನನ್ನು ಪ್ರತಿಷ್ಠಾಪನೆ ಮಾಡಿಸಿದನು. ಕಾಲಾಂತರದಲ್ಲಿ ಮಹಮ್ಮದೀಯರ ದಾಳಿಯ ಕಾಲದಲ್ಲಿ ಆ ವಿಗ್ರಹವು ಭಿನ್ನವಾಗಿ ಹೋಯಿತು. ಮುಂದೆ ಆ ದೇವಾಲಯದಲ್ಲಿ ಈಶ್ವರನ ಲಿಂಗವನ್ನು ಪ್ರತಿಷ್ಠಾಪಿಸಲಾಯಿತು. ಕೆಳದಿಯ ರಾಜಮನೆತನದವರಿಗೆಲ್ಲ ಅಘೋರೇಶ್ವರ ಸ್ವಾಮಿಯೇ ತಮ್ಮ ಕುಲದೇವತೆಯೆಂದು ಆರಾಧಿಸುತ್ತ ಬಂದರು. ಈ ಮನೆತನದವರು ಇನ್ನೂರಾ ಐವತ್ತು ವರುಷಗಳವರೆಗೆ ಬಹು ವೈಭವದಿಂದ ರಾಜ್ಯವಾಳಿದರು. ಮಹಾ ಧರ್ಮರಾಜ್ಯವೆಂದೆನಿಸಿಕೊಳ್ಳುವಂತೆ ನೋಡಿಕೊಂಡರು.

ಇ.ಸ. 1630ರ ನಂತರ ಈ ಭಾಗವೆಲ್ಲ ರಣದುಲ್ಲಾಖಾನನ ಹಾಗೂ ಛತ್ರಪತಿ ಶಿವಾಜಿಯ ತಂದೆಯಾದ ಶಹಾಜೀ ರಾಜನ ವಶಕ್ಕೆ ಹೋಯಿತು. ಆಗ ಈ ಮನೆತನದವರು ತಮ್ಮ ರಾಜಧಾನಿಯನ್ನು ವೇಣುಪುರ ಅಥವಾ ಬಿದನೂರು ಎಂಬಲ್ಲಿ ಬದಲಿಸಿಕೊಂಡರು. (ಇತ್ತೀಚೆಗೆ ಮಹಾರಾಷ್ಟ್ರ ವಿಶ್ವವಿದ್ಯಾಲಯದ ಡಾ: ಮೋರ್ ಕಂಚೀಕರ್ ಎಂಬ ಸಂಶೋಧಕರು ಉತ್ಖನನ ಕಾಲದಲ್ಲಿ ಅಘೋರೇಶ್ವರ ವಿಗ್ರಹವು ದೊರಕಿದ್ದು, ಅದನ್ನು ವಸ್ತು ಸಂಗ್ರಹಾಲಯದಲ್ಲಿ ಇಡಲಾಗಿದೆ ಎಂದು ಹೇಳಿಕೊಂಡಿರುವರು.)

ಲಿಂಗಣ್ಣ ಕವಿಯ ಈ ಕಾವ್ಯವು ಕರ್ನಾಟಕದ ವೀರಶ್ರೀಯನ್ನು ಎತ್ತಿ ತೋರಿಸುವಂತಹ ಕೆಚ್ಚೆದೆಯ ಕಾವ್ಯವೆನಿಸುವದು. ಈ ಕಾವ್ಯದಿಂದ ಕಣ್ಮರೆಯಾದ ಅಘೋರೇಶ್ವರ ದೇವನೊಂದಿಗೆ ವೀರ ಪ್ರತಾಪಿಯಾದ ಸಂಕಣ್ಣ ನಾಯಕನ ದರ್ಶನವಾದಂತಹ ಅನುಭವವಾಗುವುದರಲ್ಲಿ ಸಂದೇಹವಿಲ್ಲ.

# ನಳದುರ್ಗ ಕೋಟೆಯ ಇತಿಹಾಸ

ಗಡಿಭಾಗದ ಪ್ರದೇಶವಾದ ನಳದುರ್ಗ ಕೋಟೆಯು ಕರ್ನಾಟಕದೊಂದಿಗೆ ಇಂದಿಗೂ ತನ್ನ ಇತಿಹಾಸವನ್ನು ಬಲವಾಗಿ ಸಮರ್ಥಿಸಿಕೊಂಡು ಬಂದಿದ್ದು ಈ ಕೋಟೆಯ ಇತಿಹಾಸವು ಇ.ಸ. 973ರಿಂದ ಕಲ್ಯಾಣದ ಚಾಲುಕ್ಯರ ರಾಜ್ಯಾಡಳಿತದೊಂದಿಗೆ ಆರಂಭಗೊಳ್ಳುವುದು. ಜಯಸಿಂಹನ ಕಾಲದಲ್ಲಿ ಈ ಭಾಗವು ಸಮೃದ್ಧಿಯ ಸ್ಥಿತಿಯಲ್ಲಿತ್ತು. ಅನಂತರ ಆತನ ಮಗನಾದ ಸೋಮೇಶ್ವರದೇವನು ಮಹಾ ಪ್ರತಾಪಿ ಎಂದೆನಿಸಿಕೊಂಡನು. ಆತನ ನಂತರ ಇ.ಸ. 1015 ರಿಂದ 1038ರ ಕಾಲಾವಧಿಯವರೆಗೆ ಚಾಲುಕ್ಯರ ಮಾಂಡಲೀಕನೆನಿಸಿದ ನಳರಾಜನಿಗೆ ಈ ಭಾಗವು ಸೇರಿತು. ಈತನ ಪತ್ನಿ ದಮಯಂತಿ. ಆದರೆ ಮಹಾಭಾರತದ ನಳಮಹಾರಾಜನಿಗೂ ಈ ದಂಪತಿಗಳಿಗೂ ಯಾವಸಂಬಂಧವೂ ಇಲ್ಲ. ನಳದುರ್ಗದಿಂದ ಕೇವಲ ಐದು ಕಿ.ಮೀ. ಅಂತರದಲ್ಲಿ "ಅಣದೂರಾ" ಎಂಬ ಕ್ಷೇತ್ರವಿರುವುದು. ಹಿಂದಿನ ಕಾಲದಲ್ಲಿ ಇದನ್ನು ಆನಂದೂರ ಎಂದು ಕರೆಯುತ್ತಿದ್ದರೆಂಬ ಮಾತಿಗೆ ಪ್ರಾಚೀನ ದಾಖಲೆಗಳಿವೆ.

ಕನ್ನಡದ "ನ" ಎಂಬ ಅಕ್ಷರಕ್ಕೆ ಹೋಲುವ ರೀತಿಯಲ್ಲಿ ಕೋಟೆಯ ನಿರ್ಮಾಣವಾದುದು ವಿಶೇಷ. ಕನ್ನಡ ನಾಡಿನ ಬಹು ಭಾಗದಲ್ಲಿ ಪೂಜೆಗೊಳ್ಳುತ್ತಿರುವ ಮಾರ್ತಾಂಡ ದೇವನು ಅಣದೂರಿನ ಗುಡ್ಡದ ಮೇಲೆ ಇಂದಿಗೂ ಬಹು ವೈಭವದಿಂದ ಪೂಜೆಗೊಳ್ಳುತ್ತಿದ್ದಾನೆ. ಈ ದೇವನ ದೇವಾಲಯದ ಪರಿಸರದಲ್ಲಿ ಬಹು ವಿಶಾಲವಾದ ಕನ್ನಡ ಶಿಲಾಶಾಸನವು ಲಭ್ಯವಿದೆ. ಈ ಶಾಸನದಲ್ಲಿ ಅಮದೂರು ಮುನ್ನೂರು ಎಂಬ ಉಲ್ಲೇಖವಿದೆ. ಅಮದೂರಿನ ಮಾರ್ತಾಂಡ ದೇವನು ಈ ಭಾಗದ ಭಕ್ತರಿಗೆಲ್ಲ ಆರಾಧ್ಯ

ದೇವನಾಗಿದ್ದಾನೆ. ಈ ಶಾಸನವನ್ನು ಮರಾಠವಾಡಾದ ವಿಶ್ವವಿದ್ಯಾಲಯದವರು ಸಂಶೋಧನೆ ಮಾಡಿ ಸೊನ್ನಲಿಗೆಯೂ ಸಹ ಈ ಮುನ್ನೂರು ಗ್ರಾಮಗಳಲ್ಲಿತ್ತು ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ. ಇಂದಿನ ಸೊಲ್ಲಾಪುರವೇ ಮಹಾಮಹಿಮ ಸಿದ್ಧರಾಮನ ಸೊನ್ನಲಿಗೆ ಎಂಬುದರಲ್ಲಿ ಸಂದೇಹವಿಲ್ಲ. ಚಾಲುಕ್ಯ ವಿಕ್ರಮಾದಿತ್ಯನ ಕಾಲದಲ್ಲಿ (ಇ.ಸ. 1070 ರಿಂದ 1126) ಈ ಭಾಗವೆಲ್ಲ ಭೂಲೋಕಮಲ್ಲನ ಅಧೀನದಲ್ಲಿದ್ದುದಾಗಿ ತಿಳಿದು ಬರುತ್ತದೆ. ಈ ವಿಕ್ರಮಾದಿತ್ಯನ ಹೆಂಡತಿ ರಾಜಲದೇವಿಯು ಅಣದೂರಿನಲ್ಲಿದ್ದ ಮಾಣಕೇಶ್ವರ ದೇವಾಲಯಕ್ಕೆ ದತ್ತಿಯನ್ನು ಬಿಟ್ಟುದಾಗಿ ಪ್ರಾಚೀನ ದಾಖಲೆಗಳಿಂದ ತಿಳಿದುಬರುತ್ತದೆ. ಅಲ್ಲದೆ ಅಣದೂರು ಮಹಾತ್ಮ್ಯೆ ಎಂಬ ಸ್ಥಳಪುರಾಣದಲ್ಲಿ ಒಂದು ಕಾಲದಲ್ಲಿ ಈ ಭಾಗದಲ್ಲಿ ಋಷಿಮುನಿಗಳು ತಪಗೈಯುತ್ತಿರುವಾಗ ಮಣಿಮಲ್ಲನೆಂಬ ದೈತ್ಯನ ಉಪಟಳ ತಾಳಲಾರದೆ ಅವರೆಲ್ಲರೂ ಮಹಾದೇವನಲ್ಲಿ ಮೊರೆಹೋದರೆಂದೂ, ಭಕ್ತಪರಾಧೀನನಾದ ಶಂಕರನಿಂದ ಆ ದೈತ್ಯನ ಸಂಹಾರವಾಯಿತೆಂದೂ, ಮುನಿಗಳ ಮನೋಭೀಷ್ಟದಂತೆ ಮಹದೇವನು ಮಲ್ಹಾರಿ ಮಾರ್ತಾಂಡ ಭೈರವನ ರೂಪದಿಂದ ಅಲ್ಲಿಯೇ ವಾಸಿಸಿದನೆಂದೂ ಹೇಳಲಾಗಿದೆಯಲ್ಲದೆ, ಬೀದರ ಜಿಲ್ಲೆಯ ಪ್ರೇಮಪುರವೆಂಬಲ್ಲಿ ಆದಿಮೈಲಾರನಿರುವದಾಗಿ ಹೇಳಿ ಅಣದೂರು ಆತನ ಎರಡನೆಯ ಸ್ಥಾನವೆಂದು ಸೂಚಿಸಲಾಗಿದೆ. ಇದೆಲ್ಲವೂ ಪ್ರಾಚೀನಕಾಲದ ಇತಿಹಾಸವೆನಿಸುತ್ತದೆ.

ನಳದುರ್ಗ ಕೋಟೆಯು ಮಧ್ಯಯುಗೀನ ಕಾಲದಲ್ಲಿಯೂ ಸಹ ತನ್ನ ವರ್ಣರಂಜಿತ ಇತಿಹಾಸವನ್ನು ಹೊಂದಿದೆ. ಒಂದು ಕಾಲದಲ್ಲಿ ಇದು ಜಿಲ್ಲಾಕೇಂದ್ರವಾಗಿದ್ದು, ಇದರ ವಿಸ್ತಾರವು ಭೀಮಾನದಿಯ ಗಡಿಗುಂಟ ಅಕ್ಕಲಕೋಟೆಯವರೆಗೂ ವ್ಯಾಪಿಸಿತ್ತೆಂದು ತಿಳಿದು ಬರುತ್ತದೆ. ಕೋಟೆಕೊತ್ತಲಗಳೆಲ್ಲ ತಮ್ಮ ಗತಕಾಲದ ಇತಿಹಾಸಕ್ಕೆ ಜೀವಂತ ಸಾಕ್ಷಿಯಾಗಿದ್ದು, ಅಂತರರಾಜ್ಯ ಹಾಗೂ ಅಲ್ಲಿಯ ಪ್ರಜೆಗಳ ಸಂಸ್ಕೃತಿಯ ಏಳಿಯುಳಿಕೆಯ ಪ್ರತೀಕಗಳೆಂಬ ಭಾವನೆ ಇಂದಿಗೂ ಜನಮನದಲ್ಲಿದೆ.

ಆಗಸ್ಟ್ 1998ರ ಸುಮಾರಿನಲ್ಲಿ ನಾನು ಉಪನ್ಯಾಸಕ್ಕಾಗಿ ಗುಲಬುರ್ಗಾಕ್ಕೆ ಹೋದಾಗ ಯೋಗಾಯೋಗವೆಂಬಂತೆ ನಳದುರ್ಗ ಕೋಟೆಯ ದೇಶಮುಖ ಮನೆತನದವರಿಂದ ಅನೇಕ ಕಾಗದ ಪತ್ರಗಳನ್ನು ನೋಡುವ ಅವಕಾಶವು ಲಭಿಸಿತು. ಈ ಕೋಟೆಯನ್ನು ಕೈವಶಮಾಡಿಕೊಳ್ಳಲು ಅಹಮ್ಮದನಗರದ ನಿಜಾಮಶಹ ವಿಜಾಪುರದ ಆದಿಲ್‌ಶಾಹಿ ಹಾಗೂ ಮೊಗಲರು, ಅನಂತರ ಛತ್ರಪತಿ ಶಿವಾಜಿ ಹೀಗೆ ಅನೇಕರು ನಡೆಸಿದ ಹೋರಾಟದ ಅಭ್ಯಾಸಕ್ಕೆ ಪುಷ್ಟಿಯನ್ನೀಯುತ್ತವೆ. ಆಗಾಗ ಈ ಕೋಟೆಯ ಹಸ್ತಾಂತರವಾದಾಗ ಬರೆಯಲ್ಪಟ್ಟ ಕಾಗದಪತ್ರಗಳು ಅಭ್ಯಾಸಿಗರಿಗೆ ಹೊಸ ವಿಚಾರಗಳನ್ನು ತಿಳಿಸುತ್ತವೆ. ಈ ಕೋಟೆಯೊಂದಿಗೆ ಇ.ಸ. 1564 ರಿಂದ ಆದಿಲ್‌ಶಾಹಿ ರಾಜ್ಯದ ಸಂಬಂಧವಿರುವದು ದೊರೆಯುತ್ತದೆ. ಮುದಗಲ್ ಅಥವಾ ಮುಧೋಜಿ ಎಂಬಾತನಿಗೆ ವಿಜಾಪುರದವರು ಈ ಭಾಗದ ಉಸ್ತುವಾರಿ ವಹಿಸಿಕೊಟ್ಟ ದಾಖಲೆಗಳಿವೆ. ಯಾರು ಈ ಭಾಗವನ್ನು ತೆಗೆದುಕೊಂಡರೋ ಅವರಿಂದ ಹೊರಡಿಸಲಾದ ಐದು ಫರ್ಮಾನುಗಳು ಈ ದೇಶಮುಖ ಮನೆತನದವರ ಕಾಗದ ಪತ್ರಗಳಲ್ಲಿ ಸುರಕ್ಷಿತವಾಗಿವೆ.

ಇ.ಸ. 1686ರಲ್ಲಿ ಮೊಗಲರಿಂದ ವಿಜಾಪುರದ ಪತನವಾಯಿತು. ಆಗ ನಳದುರ್ಗದ ದೇಶಮುಖರು ಮೊಗಲರಿಗೆ ಶರಣಾದರು. ಇ.ಸ. 1707ರಲ್ಲಿ ಔರಂಗಜೇಬನು ಕೊನೆ ಕಾಲದಲ್ಲಿ ತನ್ನ ಮಗನಾದ ಕಾಮಭಕ್ಷನಿಗೆ ವಿಜಾಪುರ ಹಾಗೂ ಗೋವಳಕಂಡ ರಾಜ್ಯಗಳ ಸುಬೇದಾರಿಕೆಯನ್ನಿತ್ತಿದ್ದನು. ಅಂದು ನಳದುರ್ಗದ ದೇಶಮುಖರಾದ ನರಸಿಂಹರಾಯರಿಗೆ ಮೊಗಲರಿಂದ ದೇಶಮುಖಿಯ ಸನದು ಲಭಿಸಿತು. ಔರಂಗಜೇಬನ ಹಿರಿಯ ಮಗನಾದ ಬಹದ್ದೂರ ಶಹನು ದಿಲ್ಲಿಯ ಸಿಂಹಾಸನವನ್ನೇರಿದಾಗ ಕಾಮಭಕ್ಷನು ತಾನೇ ದಿಲ್ಲಿಯ ಸಿಂಹಾಸನದ ವಾರಸದಾರನೆಂದು ಘೋಷಿಸಿಕೊಂಡನು. ಇದರಿಂದಾಗಿ ಸೈನ್ಯಸಮೇತನಾಗಿ ಬಹದ್ದೂರಶಹನು ದಿಲ್ಲಿಯಿಂದ ಹೊರಬಿದ್ದನು. ದಕ್ಷಿಣದಲ್ಲಿದ್ದ ದೇಶಮುಖ ದೇಶಪಾಂಡೆಯವರಿಗೆಲ್ಲ ತನ್ನ ಆಗಮನವನ್ನು ತಿಳಿಸುವಂತೆ ಪ್ರಧಾನ ವಜೀರ ಮುಹೀಮ ಖಾನನಿಗೆ

ಆಜ್ಞಾಪಿಸಿದನು. ದಿನಾಂಕ 22 ಮೇ 1708ರಲ್ಲಿ ನಳದುರ್ಗದ ದೇಶಮುಖರಿಗೂ ಅಂಥ ಒಂದು ಪತ್ರವು ತಲುಪಿತು. ಇದಾದ ನಂತರ 20, ಸಪ್ಟೆಂಬರ್ 1708ರಲ್ಲಿ ಸ್ವತಃ ಬಹದ್ದೂರ್ ಶಹನೇ ನಳದುರ್ಗದ ನರಸಿಂಹರಾಯನಿಗೆ ಬರೆದ ಪತ್ರದಲ್ಲಿ ತಾನು ಹೈದರಾಬಾದದತ್ತ ಹೊರಟಿರುವುದಾಗಿ ತಿಳಿಸಿ ತನ್ನನ್ನು ಭೇಟಿಯಾಗುವಂತೆ ಆಜ್ಞಾಪಿಸಿದ ಪತ್ರವೂ ಈ ಮನೆತನದವರಲ್ಲಿರುವುದು.

ನರಸಿಂಹರಾಯನ ಮಗ ಪುರುಷೋತ್ತಮರಾಯ ಈತನಿಗೆ ಮರಾಠಾ ರಾಜ್ಯದ ರಕ್ಷಣೆಗೆ ರಾಜಾರಾಮನಿಂದ ಬರೆಸಲ್ಪಟ್ಟ ಪತ್ರವಿರುವದು. ಇದಾದ ನಂತರ ಮರಾಠಾ ರಾಜ್ಯದ ಮಹಾಪಂತ ಪ್ರಧಾನ "ಹುಕುಮತೇ ಪನ್ನಾ" ಎಂಬ ಬಿರುದಾಂಕಿತನಾದ ರಾಮಚಂದ್ರ ಪಂತನಿಂದ ಬಂದ ಪತ್ರವೂ ಉಪಲಬ್ಧವಿರುವದು. ಪುರುಷೋತ್ತಮ ರಾಯನಿಗ ರಾಮಚಂದ್ರ ಪಂತ ಅಮಾತ್ಯರ ಮಗಳಾದ ದ್ವಾರಕಾಬಾಯಿಯನ್ನು ಕೊಟ್ಟು ವಿವಾಹವಾದ ವಿವರಗಳು ದೊರೆಯುವದು. ಈ ವಿವಾಹ ಕಾಲದಲ್ಲಿ ರಾಣಿ ತಾರಾಬಾಯಿಯು (ಕೊಲ್ಹಾಪುರ) ವಧುವಿಗೆ ರಾಮನಾಥ ಎಂಬ ಹೆಸರಿನ (ಅಹಮ್ಮದನಗರ ಜಿಲ್ಲಾ) ಗ್ರಾಮವನ್ನು ದಿನಾಂಕ 31, ಜನವರಿ 1713 ರಲ್ಲಿ ಉಂಬಳಿ ಹಾಕಿಕೊಟ್ಟ ಪತ್ರವೂ ಕಾಣಸಿಗುವದು. ನರಸಿಂಹರಾಯರ ಮನೆತನವು ನೀರಾ ನರಸಿಂಹದೇವನ ಒಕ್ಕಲು ಮನೆತನವಾದುದರಿಂದ ದೇವನಿಗೆ ಹೂವು, ತುಳಸಿ ಪೂರೈಸಲು 30 ಎಕರೆ ಭೂಮಿಯನ್ನಿತ್ತ ವಿವರವು ದೊರೆಯುವುದು. ಇದೇ ಸಮಯದಲ್ಲಿ ಶ್ರೀಮದುತ್ತರಾದಿ ಮಠದಿಂದ ದಿವಾನರು ಬರೆದ ರಾಯಸ ಪತ್ರವೂ ಇರುವದು. ದ್ವಾರಕಾ ಬಾಯಿಗೆ ರಾಮರಾವ್ ಹಾಗೂ ಮಧ್ವರಾವ್ ಎಂಬಿಬ್ಬರು ಗಂಡು ಮಕ್ಕಳು. ಈ ಮನೆತನದ ಕೃ.ರಾ. ದೇಶಮುಖ ಎಂಬುವವರು ಪುಣೆಯಲ್ಲಿ ಇಂದು ಹೆಸರಾಂತ ಪ್ರಕಾಶಕರೆನಿಸಿಕೊಂಡಿರುವರು.

ನಳದುರ್ಗದ ದೇಶಮುಖರು ಮೂಲತಃ ವಿಜಾಪುರದವಾರಾಗಿದ್ದು, ಋಗ್ವೇದಿಗಳೆಂದು ಹೇಳಿಕೊಳ್ಳುವರು. ಶುದ್ಧ ವೈಷ್ಣವ

ಸಂಪ್ರದಾಯವಾದಿಗಳಾಗಿದ್ದು, ಗುಲಬರ್ಗಾ ಜಿಲ್ಲೆಯ ಖಜೂರಿ ಹಾಗೂ ಚಿಂಚೋಳಿ ಮೊದಲಾದ ದೇಶಮುಖ ಮನೆತನದವರೊಂದಿಗೆ ಸಂಬಂಧ ಬೆಳೆಸಿಕೊಂಡು ಬಂದಿರುವುದಾಗಿ ತಿಳಿದು ಬರುವದು. ಈ ಎಲ್ಲ ವಿಚಾರಗಳನ್ನು ಅಭ್ಯಾಸ ಮಾಡಿದಾಗ ನಳದುರ್ಗದೊಂದಿಗೆ ಕರ್ನಾಟಕದ ಘನವಾದ ಸಂಬಂಧವು ಎಷ್ಟಿತ್ತೆಂಬುದು ಸ್ಪಷ್ಟವಾಗಿ ತಿಳಿದು ಬರುವದು.

# ಭಾವೈಕ್ಯಕ್ಷೇತ್ರ - ಕಾಶಿ

ಕೈಲಾಸಾಧಿಪತಿಯು 'ಸಪ್ತ ಕ್ಷೇತ್ರಗಳಲ್ಲಿ ಕಾಶಿಯು ನನಗೆ ಅತ್ಯಂತ ಪ್ರೀಯವಾದುದು ಎಂದು ಹೇಳಿರುವುದುಂಟು. ಪ್ರೀಯಪತ್ನಿ ಪಾರ್ವತೀ ದೇವಿಗೂ ಹಾಗೂ ಆಹಿಕೇಲ್ ಎಂಬ ಯಕ್ಷನಿಗೂ ಈ ಮಾತನ್ನು ಉಪದೇಶ ಮಾಡಿರುವುದುಂಟು. ಕಾಶೀ ಕ್ಷೇತ್ರದ ಪ್ರಾಚೀನತೆ ಅರ್ವಾಚೀನತೆ ಹಾಗೂ ಅಧುನಿಕತೆಗಳ ವಿಚಾರದಲ್ಲಿ, ಕಾಶೀಖಂಡ, ಮತ್ಸ್ಯಪುರಾಣ, ಕೃತ್ಯ ಕಲ್ಪತರು ಕೃತಿಗಳಲ್ಲಿ ಉಲ್ಲೇಖಗಳು ಲಭಿಸುತ್ತವೆ. ಖ್ಯಾತ ಇತಿಹಾಸ ಸಂಶೋಧಕರೆನಿಸಿದ ಮೋತಿಚಂದ್ರ ಹಾಗೂ ಜಿಲ್ಹಾಧಿಕಾರಿಯಾಗಿ ಸೇವೆಗೈದ ವಿದೇಶಿಯನಾದ ಜೇಮ್ಸ್ ಪ್ರಿನ್ಸೆಪ್ ಅವರಿಂದ ರಚಿತವಾದ ಕಾಶೀ ಕ್ಷೇತ್ರದ ಮಾಹಿತಿ ಹಾಗೂ ತೈಲ ಚಿತ್ರಗಳ ಅಭ್ಯಾಸವು ಬಹು ಉಪಯುಕ್ತವೆನಿಸುತ್ತದೆ. ವಾರಾಣಾ ಹಾಗೂ ಅಸಿ ಪ್ರವಾಹಗಳಿಂದಾಗಿ ಇದಕ್ಕೆ ವಾರಣಾಸಿ ಎಂದು ಕರೆಯುವದು ರೂಢಿಯಲ್ಲಿ ಬಂದಿತು. ಗಂಗಾ ಪ್ರವಾಹದ ಎಡಬಲದಲ್ಲಿಯ ಫಲವತ್ತಾದ ಭೂಮಿಯಿಂದಾಗಿ ಅನ್ನಪೂರ್ಣಾ ದೇವಿಯು ಕಾಶಿಯನ್ನೇ ತನ್ನ ತವರು ಮನೆಯನ್ನಾಗಿ ಮಾಡಿಕೊಂಡಳು.

ವಿಘ್ನಗಳನ್ನುನಿವಾರಿಸುವ ಗಣೇಶನು ಈ ಕ್ಷೇತ್ರದ ಪ್ರತಿಯೊಂದು ಭಾಗದಲ್ಲಿ ಜಾಗೃತನಾಗಿ ನಿಂತಿರುವ ವರ್ಣನೆಯು ಕಂಡು ಬರುವದು. ಸೂರ್ಯಮಂದಿರ, ಬ್ರಹ್ಮದೇವ, ಕಾರ್ತಿಕ, ವೇತಾಳ, ರುದ್ರಗಣ, ಭೈರವ ಮೊದಲಾದ ದೇವತೆಗಳ ಮಂದಿರಗಳೂ ಇಲ್ಲಿವೆ.

ಪಂಚಭೂತಗಳ ಭಯದಿಂದ ಮುಕ್ತರಾಗಲು ಆದಿವಾಸಿಗಳು ದೇವತೆಗಳನ್ನು ನಾನಾ ರೀತಿಯಲ್ಲಿ ಪೂಜಿಸತೊಡಗಿದರು. ಕಾಶೀ ಖಂಡದಲ್ಲಿ ಅಗ್ನಿದಿವ್ಯ ವೇತಾಳಖಂಡವೆಂಬ ಭಾಗವೂ ಇದೆ. ಕಾಲಾಂತರದಲ್ಲಿ ಈ

ದೇವರು ವೇತಾಳೇಶ್ವರನಾಗಿ ಕಾರ್ಕೋಟಕ, ಭದ್ರ, ಮಣಿದೀಪ ಎಂಬ ಹೆಸರಿನಲ್ಲಿ ನಾಗ ದೇವತೆಗಳಾಗಿ ನಾಗ ಪಂಚಮಿಯ ದಿನ ವಾಸುಕಿಕೊಂಡ ಎಂಬ ಭಾಗದಲ್ಲಿ ವಿಶೇಷ ವೈಭವದಿಂದ ಪೂಜೆ ಗೊಳ್ಳತೊಡಗಿದನು.

ಜೇಮ್ಸ್ ಪ್ರಿನ್ಸೆಪ್ ಎಂಬ ಬ್ರಿಟಿಶ್ ಮಹನೀಯ ವಾರಾಣಸಿಯ ಜಿಲ್ಲಾಧಿಕಾರಿಯಾಗಿ ಸೇವೆಗೈಯುವಾಗ ಆ ಕ್ಷೇತ್ರದ ಅನೇಕ ಭಾಗಗಳನ್ನು ಚಿತ್ರರೂಪದಲ್ಲಿ ಬಿಡಿಸಿಟ್ಟಿರುವುದುಂಟು. ಆ ಚಿತ್ರದಲ್ಲಿ ಪ್ರಸಿದ್ಧ ಶಿವದವಾಲಯದೊಂದಿಗೆ ಇನ್ನೂ ಅನೇಕ ದೇವಾಲಯಗಳು ಜರಾ ಜೀರ್ಣ ಸ್ವರೂಪದಲ್ಲಿದ್ದುದು ಕಂಡುಬರುವದು.

ಒಂದು ಕಾಲದಲ್ಲಿ ಕಾಶಿ ಕ್ಷೇತ್ರದಲ್ಲಿ ಮುನ್ನೂರಾಐವತ್ತೇಳು ಶಿವದೇವಾಲಯಗಳಿದ್ದವು. ಕಾಲನ ವಿಕಟ ನಾಟ್ಯಕ್ಕೆ ಬಲಿಯಾಗಿ ಅವು ಇಂದು ಕಾಣದಂತಾಗಿ ಹೋದವು. ಜೇಮ್ಸ್ ಪ್ರಿನ್ಸೆಪ್ ಹೇಳಿಕೆಯಂತೆ ಇಂದಿರುವ ಶಿವದೇವಾಲಯವು ವಿಶಾಲವಾದ ಹಾಗೂ ಒಳ್ಳೇ ಪರಿಸರದಿಂದ ಯುಕ್ತವಾಗಿತ್ತು. ಪರಿಸರದಲ್ಲಿಯ ವೃಕ್ಷಗಳು ನಯನ ಮನೋಹರವಾಗಿ ಕಾಣುವಂತೆ ಬೆಳೆದಿದ್ದವು. ದೇವಾಲಯದ ಮೇಲಿರುವ ಬಂಗಾರದ ಕಲಶವು ಭಕ್ತರ ಕಣ್ಮನಗಳನ್ನು ಆಕರ್ಷಿಸುತ್ತಿತ್ತು. ಬೆಳಗಿನ ನಾಲ್ಕು ಗಂಟೆಯಿಂದಲೇ ವಿಶ್ವನಾಥನಿಗೆ ಅಭಿಷೇಕಾದಿಗಳು ಆರಂಭಗೊಳ್ಳುತ್ತಿದ್ದವು. ದೇವಾಲಯದ ಒಳ ಪ್ರಾಕಾರದಲ್ಲಿ ಘಂಟಾಕರ್ಣ, ವೀರಭದ್ರ, ಕ್ಷೇಮಕ, ಚತುಶ್ರಂಗ ಮೊದಲಾದ ಶಿವಲಿಂಗಗಳು ಜ್ಞಾನವಾಪಿಯ ಉತ್ತರ ಭಾಗದಲ್ಲಿದ್ದವು. ಒಂಭತ್ತನೇ ಶತಮಾನದ ಕಾಲಭೈರವನ ದೇವಾಲಯವು ಪೂರ್ವಭಾಗದಲ್ಲಿತ್ತು.

## ಬಂಧ ವಿಮೋಚನಾ ತೀರ್ಥ

ಗಂಗಾ ನದಿಯ ಪ್ರವಾಹದ ದಂಡೆಯಲ್ಲಿರುವ ಸ್ನಾನಘಟ್ಟಗಳ ಉತ್ಖನನ ಕಾರ್ಯವು ಆರಂಭಗೊಂಡಾಗ ಅನೇಕ ಹಿಂದು ಹಾಗೂ ಬೌದ್ಧ ವಿಗ್ರಹಗಳು ಪತ್ತೆಯಾದುವು. ಕಾಶೀಖಂಡ ಹಾಗೂ ಕೃತ್ಯಕಲ್ಪ ಗ್ರಂಥಗಳ ಅಭ್ಯಾಸದಿಂದ ಕಾಶಿಯಲ್ಲಿರುವ ಅನೇಕ ಮಹತ್ವದ ಸ್ಥಾನಗಳನ್ನು ಗುರುತಿಸ ಬಹುದು. ಗಣಪತಿಯಂತೆ ಕಾರ್ತಿಕೇಯನೂ ಸಹ ಶಿವ ಪುತ್ರನಷ್ಟೆ? ಆತ

ದೇವತೆಗಳ ಸೇನಾನಿಯೂ ಅಹುದು. ಆತನ ವಿಚಾರದಲ್ಲಿ ಈ ಗ್ರಂಥಗಳಲ್ಲಿ ಸಾಕಷ್ಟು ಮಾಹಿತಿಯು ಉಪಲಬ್ಧವಿರುವದು. ಇಲ್ಲಿ ದೊರೆತ ಅನೇಕ ವಿಗ್ರಹಗಳನ್ನು ಭಾರತ ಕಲಾಮಂದಿರದಲ್ಲಿ ನಾವು ಕಾಣಬಹುದು. ಕಾರ್ತಿಕನಂತೆ ಭೈರವದೇವನೂ ಸಹ ಶಿವಪುತ್ರ ನೆಂದೆನಿಸಿಕೊಂಡಿದ್ದಾನೆ. ಒಂದು ಸಂದರ್ಭದಲ್ಲಿ ಬ್ರಹ್ಮದೇವನು ಮಹದೇವನ ವಿಚಾರದಲ್ಲಿ ಗೇಲಿ ಮಾಡಿದಾಗ ಕುಪಿತನಾದ ಭೈರವದೇವನು ಬ್ರಹ್ಮನ ಐದನೆಯ ತಲೆಯನ್ನು ಕಡಿದನಂತೆ, ಬ್ರಹ್ಮಹತ್ಯೆಯ ದೋಷದಿಂದಾಗಿ ವಿಷ್ಣುವಿನಲ್ಲಿ ಮೊರೆಹೋದನು. ಆಗ ವೈಕುಂಠ ಪತಿಯು ವಿಶ್ವದಲ್ಲಿ ಪರಮ ಪವಿತ್ರವೆನಿಸಿದ ವಾರಾಣಾ ಶಿಲಾ ಎಂಬಲ್ಲಿಗೆ ಹೋಗಿ ನಿರ್ಮಲ ಮನದಿಂದ ಗಂಗೆಯಲ್ಲಿ ಮಿಂದರೆ ಆಗ ಬ್ರಹ್ಮಹತ್ಯಾ ದೋಷದಿಂದ ಮುಕ್ತನಾಗಬಹುದೆಂಬ ಸೂಚನೆ ಮಾಡಿದನು. ಭೈರವನು ಅದರಂತೆ ನಡೆದನೆಂದೂ, ಮುಂದೆ ಆ ಸ್ಥಳವನ್ನು ''ಬಂಧವಿಮೋಚನಾ ತೀರ್ಥ''ವೆಂದೂ ಕರೆಯತೊಡಗಿದರೆಂದು ತಿಳಿಯುವದು. ಈ ತೀರ್ಥದ ಸಮೀಪದಲ್ಲಿ ಮಹಾಭೈರವ, ಭೈರವೇಶ್ವರ, ಭೈರವಕುಂಡ ಮೊದಲಾದವುಗಳು ಗಂಗಾ ಪ್ರವಾಹದ ಗುಂಟಕಾಣಸಿಗುವವು.

ಇತಿಹಾಸತಜ್ಞರಾದ ಮೋತಿಚಂದ್ರರು ಭೈರವನ ಉಗಮವು ಯಕ್ಷಗಣದಿಂದಾಯಿತೆಂದು ಅಭಿಪ್ರಾಯಪಡುತ್ತಾರೆ. ವಿಶ್ವನಾಥ ದೇವಮಂದಿರದಲ್ಲಿರುವ ಅಕ್ಷಯ ವೃಕ್ಷದಡಿಯಲ್ಲಿ ಸೂರ್ಯಪೀಠವಿದೆ ಎಂದೆನ್ನುತ್ತಾರೆ. ಅದೇ ಸ್ಥಳದಲ್ಲಿ ಅತ್ಯಂತ ಪ್ರಾಚೀನವೆನಿಸಿದ ನಟರಾಜನ ವಿಗ್ರಹವಿದೆ. ಅಲ್ಲದೆ ಮಯುಖಾದಿತ್ಯ, ವನಿತಾದಿತ್ಯ (ಸೂರ್ಯನ ಸಾರಥಿ) ಈ ವಿಗ್ರಹಗಳು ಅರುಣನ ತಾಯಿ ವಿನೀತಾ ಎಂಬುವವಳಿಂದ ಪ್ರತಿಷ್ಠಾಪಿಸಲಾಯಿತೆಂದು ತಿಳಿದು ಬರುತ್ತದೆ. ಇದಲ್ಲದೆ ವರುಣಾದಿತ್ಯ, ವೃದ್ಧಾದಿತ್ಯ, ಕೇಶವಾದಿತ್ಯ, ಯಮಾದಿತ್ಯ ಮೊದಲಾದವರ ಮಾತೆಯು ಅದಿತಿದೇವಿ ಎಂದೂ, ಅವಳು ಸಮಸ್ತ ದೇವತೆಗಳಿಗೆಲ್ಲ ಮಾತೃ ಸ್ವರೂಪಳೆಂದೂ ಹೇಳಲಾಗಿದೆ. ಋಗ್ವೇದದಲ್ಲಿ ಕೇವಲ ಕೆಲವೇ ಸಂದರ್ಭ ಗಳಲ್ಲಿ ಸ್ತ್ರೀ ದೇವತೆಗಳ ಉಲ್ಲೇಖವಿದೆ. ಅದಿತಿ ದೇವಿಯಿಂದಲೇ ಮಾತೃ ಸ್ವರೂಪದ ಪೂಜೆ ಆರಂಭವಾಯಿತೆಂದು ವಿದ್ವಾಂಸರ ಅಭಿಪ್ರಾಯವಿದೆ.

ಕಾಶೀ ಕ್ಷೇತ್ರವು ಕೇವಲ ಶೈವ ಅಥವಾ ಮಹದೇವನ ಕ್ಷೇತ್ರವಾಗಿರದೆ,

ಗುಪ್ತರ ಕಾಲದಲ್ಲಿ ಅನೇಕ ವಿಷ್ಣು ದೇವಾಲಯಗಳೂ ಇಲ್ಲಿ ನಿರ್ಮಾಣವಾದವು. ಬಹು ಸುಂದರವಾದ ಅಷ್ಟೇ ಕಲಾತ್ಮಕವಾದ ವಿಗ್ರಹಗಳೊಂದಿಗೆ ಮನಮೋಹಕವಾದ ದೇವಮಂದಿರಗಳೂ ನಿರ್ಮಾಣಗೊಂಡಿದ್ದವು. ಅಷ್ಟೇ ಅಲ್ಲದೆ ಕಾಶಿಯನ್ನು ವಿಷ್ಣುಕ್ಷೇತ್ರವೆಂದು ಕೆಲವು ಪುರಾಣಗಳು ಉಲ್ಲೇಖಿಸಿವೆ. ಯಾವುದೇ ಪ್ರವಾಹವು ಇರಲಿ, ಆ ಸ್ಥಳದಲ್ಲಿ ಹರಿಹರೇಶ್ವರರಿಬ್ಬರೂ ವಾಸವಾಗಿರುವರೆಂಬುದಕ್ಕೆ ಅನೇಕ ಉದಾಹರಣೆಗಳಿವೆ. (ಕರ್ನಾಟಕದಲ್ಲಿ ಕೂಡಲಸಂಗಮ, ನಂಜನಗೂಡು, ತುಂಗಭದ್ರಾ ತೀರದಲ್ಲಿರುವ ಹರಿಹರೇಶ್ವರ).

ಕಾಶೀಖಂಡದಲ್ಲಿ ಹೇಳಿದಂತೆ ಈ ಕ್ಷೇತ್ರದಲ್ಲಿ ಐನೂರು ನಾರಾಯಣನ ವಿಗ್ರಹಗಳು, ಶೇಷಶಾಹಿಯ ನೂರು ವಿಗ್ರಹಗಳು, ಮತ್ಸ್ಯರೂಪದಲ್ಲಿ ಮೂವತ್ತು, ಗೋವರ್ಧನ ರೂಪದಲ್ಲಿ ನೂರೆಂಟು, ಮಂದಿರಗಳಿದ್ದವಂತೆ, ಸ್ವಯಂಭೂ ಭಗವಾನ ವಿಷ್ಣುವಿನ ವಿಗ್ರಹವಂತೂ ವಿಶ್ವನಾಥ ಮಂದಿರದ ಮುಕ್ತಿಮಂಟಪದಲ್ಲಿತ್ತೆಂದೂ. ಕಾಲಾಂತರದಲ್ಲಿ ಆ ಭಾಗವೆಲ್ಲಾ ದಾಳಿಗೆ ಬಲಿಯಾಯಿತೆಂದೂ ಹೇಳಲಾಗಿದೆ. ಕೃತ್ಯಕಲ್ಪತರು ಗ್ರಂಥವು ಈ ವಿಷಯದಲ್ಲಿ ವಿಸ್ತಾರವಾದ ಮಾಹಿತಿಯನ್ನೊದಗಿಸುತ್ತದೆ. ಇಲ್ಲಿರುವ ಬಿಂದುಮಾಧವನನ್ನೇ ಆದಿಕೇಶವನೆಂದು ಪೂಜಿಸುತ್ತಿದ್ದರು. ಅಪಾರ ಐಶ್ವರ್ಯದಿಂದ ಕೂಡಿದ ಮಂದಿರವು ಇದಾಗಿತ್ತು. ಕಾಲಾಂತರದಲ್ಲಿ ಕುತುಬುದ್ದೀನ ಐಬಕ್‌ನಿಂದಾಗಿ ಈ ಮಂದಿರವು ಹಾಳಾಯಿತು. ವಿದೇಶದಿಂದ ಆಗಮಿಸಿದ ಮಹಮ್ಮದೀಯರು ಈ ಭಾಗದಲ್ಲಿಯೇ ವಾಸ ಮಾಡುವಂತೆ ಆತನು ವ್ಯವಸ್ಥೆ ಮಾಡಿದ. ಕಾಶಿಯಲ್ಲಿ ಮಸೀದಿಗಳಿಗೇನೂ ಕೊರತೆಯಿಲ್ಲ. ಯಾವುದೇ ಮಸೀದಿಗೆ ಹೋದರೂ ಒಂದಿಲ್ಲೊಂದು ಭಾಗದಲ್ಲಿ ಹಿಂದೂ ದೇವಾಲಯದ ಕುರುಹಗಳನ್ನು ನಾವು ಕಾಣಬಹುದೆಂದು ಇತಿಹಾಸಜ್ಞರ ಅಭಿಪ್ರಾಯವಿರುವದು.

ಬಹು ಕಾಲದಿಂದ ಕಾಶಿ ಹಿಂದೂ-ಮಹಮ್ಮದೀಯರ ಭಾವೈಕ್ಯದ ತಾಣವಾಗಿತ್ತು. ಪರಸ್ಪರರಲ್ಲಿ ಸೌಹಾರ್ದ ಭಾವವಿತ್ತು. ವ್ಯಾಪಾರ ವ್ಯವಹಾರಗಳಲ್ಲಿ ಸಹಭಾಗಿತ್ವವಿತ್ತು. ಎಂಬ ಮಾತೂ ಸಹ ಪ್ರಾಚೀನ ಇತಿಹಾಸದ ಅಭ್ಯಾಸದಿಂದ ಸ್ಪಷ್ಟವಾಗಿ ತಿಳಿದು ಬರುವದು.